ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ–೧೩೭

# ಗ್ರೆಗೋರ್ ಮೆಂಡೆಲ್

ಡಾ|| ಬನ್ನೂರು ನಂ. ಬೋಳೀಗೌಡ

ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೫

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ-೧೩೭

# ಗ್ರೆಗೋರ್ ಮೆಂಡೆಲ್

ಡಾ|| ಬನ್ನೂರು ನಂ. ಬೋಳೇಗೌಡ

ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೫

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯ ವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕ ವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕ ವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗು ತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತ ವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ನೂರ ಮೂವ್ವತ್ತಾರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಬನ್ನೂರು ನಂ. ಬೋಳೇಗೌಡ ಅವರ 'ಗ್ರೆಗೋರ್ ಮೆಂಡಲ್' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೮-೪-೧೯೬೫

ಕೆ. ಎಲ್. ಶ್ರೀಮಾಲಿ
ವೈಸ್-ಛಾನ್ಸಲರ್

# ಅರಿಕೆ

ಕೃತಿಕಾರನು ಕೃತಿಗಳನ್ನು ಸೃಷ್ಟಿಸಿದರೆ, ಅವು ಕ್ರಮೇಣ ಲೋಕಪ್ರಿಯವಾದರೆ, ಕೃತಿಗಳು ಕೃತಿಕಾರನನ್ನೇ ಅಮರಗೊಳಿಸುತ್ತವೆ. ಶಿಲ್ಪಚಾತುರ್ಯ ಮತ್ತು ಶಿಲ್ಪಕಲಾಕೌಶಲ್ಯಗಳು ಶಿಲ್ಪಿಯನ್ನು ಚಿರಸ್ಮರಣೀಯಗೊಳಿಸುತ್ತವೆ. ಹಿರಿಯ ಸಾಹಸವನ್ನು ಪ್ರದರ್ಶಿಸಿದ–ಪ್ರಥಮ ಬಾರಿಗೆ ಅಟ್ಲಾಂಟಿಕ್ ಸಾಗರವನ್ನು ದಾಟುವುದು, ಗೌರಿಶಂಕರವನ್ನು ಹತ್ತಿ ಧ್ವಜವನ್ನು ನಾಟುವುದು, ಬಾಹ್ಯಾಕಾಶದಲ್ಲಿ ಯಾನಮಾಡುವುದು ಇತ್ಯಾದಿ–ಸಾಹಸಿ ಮಾನವನು ಚಿರಂಜೀವಿಯಾಗಿರುತ್ತಾನೆ. ಹಾಗೆಯೇ ವೈಜ್ಞಾನಿಕ ಸಂಶೋಧಕನು ಪ್ರಕೃತಿಲೀಲೆಯನ್ನು ಅಧ್ಯಯನಮಾಡಿ, ಸತ್ಯಾನ್ವೇಷಣೆಯಿಂದ ನಿಯಮಾವಳಿಗಳನ್ನು ಕಂಡುಹಿಡಿದರೆ, ಸಂಶೋಧಕನ ಮಹತ್ಸಾಧನೆಯು ಅವನನ್ನು ಚಿರಾಯುಗೊಳಿಸುತ್ತದೆ. ಧೃವತಾರೆಯಾಗಿ ನಿಲ್ಲಿಸುತ್ತದೆ. ಅಂತಹ ಒಂದು ಪ್ರಸಂಗ ಗ್ರೆಗೋರ್ ಮೆಂಡೆಲನ ಸಾಧನೆಗೆ ಸಂಬಂಧಿಸಿದ್ದು.

ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಅಧಿಕಾರಿಗಳು ಪ್ರಚಾರೋಪನ್ಯಾಸಮಾಲೆಯಲ್ಲಿ ನನಗೆ "ಮೆಂಡೆಲ್ ಮತ್ತು ಅವನ ಪ್ರಯೋಗಗಳು" ಎಂಬ ವಿಷಯದ ಬಗ್ಗೆ ೩-೧೨-೧೯೬೩ ರಂದು ತರೀಕೆರೆಯಲ್ಲಿ ಭಾಷಣಮಾಡಲು ಸದವಕಾಶವನ್ನಿತ್ತಿದ್ದರು. ಆ ಭಾಷಣದ ಆಧಾರದ ಮೇಲೆ ಈ ಕಿರುಹೊತ್ತಿಗೆಯನ್ನು ಬರೆದಿದ್ದೇನೆ. ಬರೆದ ಕರಡುಪ್ರತಿಯನ್ನು ಓದಿ ಸಲಹೆ ನೀಡಿದ ಮಾನಸಗಂಗೋತ್ರಿಯ ಕನ್ನಡ ಪ್ರಾಧ್ಯಾಪಕರಾದ ಶ್ರೀ ದೇ. ಜವರೇಗೌಡರವರಿಗೆ ನಾನು ಆಭಾರಿಯಾಗಿದ್ದೇನೆ.

ಅಲ್ಲದೆ ಅದೇ ವಿಭಾಗದ ಕನ್ನಡ ರೀಡರ್ ಆದ ಡಾ|| ಎಲ್. ಬಸವರಾಜುರವರು ಈ ಕರಡುಪ್ರತಿಯನ್ನು ಆಮೂಲಾಗ್ರವಾಗಿ ಓದಿ, ಅಲ್ಲಲ್ಲಿ ಕಂಡುಬಂದ ಭಾಷಾದೋಷಗಳನ್ನು ತಿದ್ದಿ ಪ್ರಬಂಧವನ್ನು ಉತ್ತಮಗೊಳಿಸಿದ್ದಾರೆ. ಅವರಿಗೆ ನಾನು ತುಂಬಾ ಚಿರಋಣಿ. ಗ್ರೆಗೋರ್ ಮೆಂಡೆಲನ ಫೋಟೋವನ್ನು ಈ ಕಿರುಹೊತ್ತಿಗೆಯಲ್ಲಿ ಬಳಸಲು ಅನುಮತಿ ನೀಡಿದ W.W. ನೋರ್ಟನ್ ಮತ್ತು ಕಂಪನಿ (ನ್ಯೂಯಾರ್ಕ್)ಯವರಿಗೆ ನನ್ನ ವಂದನೆಗಳು.

ಮೆಂಡೆಲನ ಜೀವನ ಮತ್ತು ಅವನ ಕಾರ್ಯಸಾಧನೆಯ ಬಗ್ಗೆ ಭಾಷಣಮಾಡಲು ಮತ್ತು ಬರೆದ ಲೇಖನವನ್ನು ಒಪ್ಪಿ, ಅಂದವಾಗಿ, ತಪ್ಪಿಲ್ಲದೆ ಮುದ್ರಿಸಲು ಆಸಕ್ತಿವಹಿಸಿದ ಮತ್ತು ನೆರವು ನೀಡಿ ಪ್ರೋತ್ಸಾಹಿಸಿದ ಪ್ರಸಾರಾಂಗದ ಅಧಿಕಾರವರ್ಗದವರಿಗೆ ನಾನು ತುಂಬಾ ಚಿರಋಣಿಯಾಗಿದ್ದೇನೆ.

ಮೈಸೂರು
೩೦-೪-೧೯೬೫

ಬನ್ನೂರು ನಂ. ಬೋಳೇಗೌಡ

## ವಿಷಯಸೂಚಿಕೆ


೧. ಬಾಲ್ಯ ಮತ್ತು ವಿದ್ಯಾರ್ಥಿ ಜೀವನ .... ೧

೨. ಆಶ್ರಮವಾಸ ಮತ್ತು ಬೋಧಕವೃತ್ತಿ .... ೧೫

೩. ತಳಿಮಿಶ್ರಣ ಪ್ರಯೋಗಗಳು .... ೩೪

೪. ಮಠದ ಮುಖ್ಯಾಧಿಕಾರಿಯಾಗಿ .... ೬೭

೫. ಪುನರುತ್ಥಾನ .... ೭೪

೬. ಗ್ರಂಥಋಣ .... ೮೧

# ಗ್ರೆಗೋರ್ ಮೆಂಡೆಲ್

## ೧. ಬಾಲ್ಯ ಮತ್ತು ವಿದ್ಯಾರ್ಥಿ ಜೀವನ

ಮಾನವನ ಕಲ್ಯಾಣಕ್ಕೆ ಪ್ರಕೃತಿಯ ನಿಯಮಾವಳಿಗಳನ್ನು ಅರ್ಥಮಾಡಿಕೊಳ್ಳುವುದು ಅತ್ಯಗತ್ಯ ಮತ್ತು ಅತ್ಯಾವಶ್ಯಕ. ಇದಕ್ಕಾಗಿ ಹಲವಾರು ಮಹಾಪುರುಷರು ಜಗತ್ತಿನಲ್ಲಿ ಜನ್ಮತಾಳಿ, ಸತತವಾಗಿ ತಪಸ್ಸು ಮಾಡಿ, ತನ್ಮೂಲಕ ಕಂಡ ಬೆಳಕನ್ನು ಲೋಕಕ್ಕೆ ನೀಡಿ, ಮಾನವನ ಪ್ರಗತಿಯ ಇತಿಹಾಸದಲ್ಲಿ ಅಮರತ್ವವನ್ನು ಸಂಪಾದಿಸಿದ್ದಾರೆ. ಪ್ರಕೃತಿಯ ಭಂಡಾರ ವನ್ನು ಹೊಕ್ಕು, ಪ್ರಕೃತಿಯ ಲೀಲಾಸೂತ್ರಗಳನ್ನು ಬಿಡಿಸಿ ತರುವವನು ಧೀರನೇ ಸೈ. ಕೇವಲ, ಪ್ರತಿಭೆ ಪಾಂಡಿತ್ಯಗಳಿದ್ದ ಮಾತ್ರಕ್ಕೆ ಪೂರ್ಣ ಜಯ ದೊರಕದಿರಬಹುದು. ಕಾರ್ಯ ನೈಪುಣ್ಯ, ಕಲ್ಪನಾಚಾತುರ್ಯ, ವಿಶೇಷ ವಿಶ್ಲೇಷಣಾ ಸಾಮರ್ಥ್ಯ, ಕಾರ್ಯೋದ್ದೇಶ, ತಾಳ್ಮೆ ಎಲ್ಲವೂ ಬೇಕು. ಇಂತಹ ಪರಿ ಶೋಧನೆಯ ಕಥಾಶ್ರೇಣಿಗಳಲ್ಲಿ ಆನುವಂಶೀಯತೆಯ ನಿಯಮ ಗಳನ್ನು ಕಂಡುಹಿಡಿದ ಕಥೆ ನಿಜಕ್ಕೂ ಪ್ರಶಂಸನೀಯ. ಹಲವು ಕಾಲ ವಿಸ್ಮೃತಿಯ ಆಳದಲ್ಲಿ ಮುಳುಗಿದ್ದು, ಹಠಾತ್ತಾಗಿ ಜಗತ್ತಿನ ಸ್ಮೃತಿಪಥದಲ್ಲಿ ತೇಲಿಬಂದು, ಅದರ ಮೆಚ್ಚುಗೆ ಯನ್ನು ಸೂರೆಗೊಂಡಿದ್ದು ಇನ್ನೂ ಆಶ್ಚರ್ಯಕರವಲ್ಲವೇ? ಇಂತಹ ಪ್ರಸಂಗ ಮೊರಾವಿಯಾ ಪ್ರಾಂತದ ಗ್ರೆಗೋರ್ ಯೋಹನ್ ಮೆಂಡೆಲ್(Gregor Johann Mendel)ನ ಜೀವನಕ್ಕೆ ಸಂಬಂಧಿಸಿದ್ದು.

ಮೊರಾವಿಯಾ ಜೆಕೊಸ್ಲೊವಾಕಿಯಾ ದೇಶದ ಒಂದು ಮಧ್ಯ ಪ್ರಾಂತ. ಪ್ರಥಮ ವಿಶ್ವ ಮಹಾಸಮರಕ್ಕೆ ಮೊದಲು ಅಂದರೆ,

ಈ ದೇಶವು ಅಸ್ತಿತ್ವಕ್ಕೆ ಬರುವುದಕ್ಕೆ ಮುನ್ನ, ಇದು ಆಸ್ಟ್ರಿಯ–ಹಂಗೇರಿ ಚಕ್ರಾಧಿಪತ್ಯದ ಒಂದು ಭಾಗವಾಗಿತ್ತು. ಈ ಚಕ್ರಾಧಿಪತ್ಯದ ಈಶಾನ್ಯದ ಎಲ್ಲೆಯು ಜರ್ಮನ್, ಪೋಲೆಂಡ್ ಮತ್ತು ಜೆಕೊಸ್ಲೊವಾಕಿಯಾ ದೇಶದ ಸಾಮಾನ್ಯ ಗಡಿ. ಅಂದರೆ ಇದು ಜರ್ಮನ್, ಜೆಕ್ ಮತ್ತು ಪೋಲ್ ಜನಾಂಗಗಳ ಸಂಗಮ ಪ್ರದೇಶವಾಗಿತ್ತು. ಹಿಂದೆ ಮಧ್ಯ ಯುಗದಲ್ಲಿ (ಸುಮಾರು ಕ್ರಿ.ಶ. ೧೦೦೦-೧೪೦೦) ಮಂಗೋಲಿಯಾದ ಟಾರ್ಟರ್‌ರವರು ದಾಳಿಮಾಡಿದ್ದು ಈ ಮಧ್ಯ ಯೂರೋಪಿನಲ್ಲಿಯೇ ಏಳೆಂಟು ಶತಮಾನಗಳಿಂದ ಈ ಮೂರು ಜನಾಂಗಗಳಲ್ಲಿ ಆಗಾಗ್ಗೆ ಜಗಳವಾಗುತ್ತಿದ್ದವು; ಆಗಾಗ್ಗೆ ಪರಸ್ಪರ ವೈವಾಹಿಕ ರಕ್ತಸಂಬಂಧಗಳೂ ಏರ್ಪಡುತ್ತಿದ್ದವು. ತತ್ಫಲವಾಗಿ ಈಗ ಅಲ್ಲೊಂದು ಸೊಗಸಾದ ಸಾಮರಸ್ಯದ ಮಿಶ್ರಜನಾಂಗ ರೂಪುಗೊಂಡಿದೆ.

ಹೈನ್‌ಸೆನ್‌ಡೋರ್ಫ್(Heinzendorf)ಎಂಬುದು ಮೊರಾವಿಯಾ ಪ್ರಾಂತದ ಈಶಾನ್ಯ ಎಲ್ಲೆಯಲ್ಲಿದ್ದ ಜರ್ಮನ್ ವಸಾಹತು ಪ್ರದೇಶದ ಒಂದು ಪುಟ್ಟ ಹಳ್ಳಿ. ಈಗ ಇದಕ್ಕೆ ಹ್ರನೀಸ್ (Hranice)ಎಂಬ ಹೆಸರು ಬಂದಿದೆ. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಆಂಟೋನ್ ಮೆಂಡೆಲ್ (Anton Mendel) ಎಂಬುವನ ಒಂದು ಬಡ ರೈತಕುಟುಂಬ ಈ ಹಳ್ಳಿಯಲ್ಲಿತ್ತು. ಇವನ ವಂಶಪರಂಪರೆಯಲ್ಲಿ ಹಿಂದೆ ಜರ್ಮನ್ ಮತ್ತು ಜೆಕ್‌ರ ವೈವಾಹಿಕ ಸಂಬಂಧ ಪ್ರಾಯಶಃ ಏರ್ಪಟ್ಟಿರಬೇಕೆಂದು ಆ ಹಳ್ಳಿಯ ಹಲವರ ನಂಬಿಕೆ ಕೂಡ ಇತ್ತು. ಆಂಟೋನನು ಎಂಟು ವರ್ಷ ಸೈನ್ಯದಲ್ಲಿ ಸೇವೆ ಸಲ್ಲಿಸಿ, ಅನಂತರ ನಿವೃತ್ತನಾದಮೇಲೆ ತನ್ನ ವಾಸದ ಬಳಿಯಲ್ಲಿಯೇ

ಇದ್ದ ತನ್ನ ಸ್ವಂತ ಜಮೀನಿನಲ್ಲಿ ಬೇಸಾಯ ಮತ್ತು ತೋಟ ಗಾರಿಕೆಯಲ್ಲಿ ನಿರತನಾಗಿರುತ್ತಿದ್ದನು. ಇವನು ವಾಸ್ತವವಾಗಿ "೫೮ನೇ ನಂಬರಿನ ಹಿಡುವಳಿದಾರ"ನಾಗಿದ್ದನು. ಅದರ ಪ್ರಕಾರ ಅವನಿಗಿದ್ದ ಸ್ಥಿರ ಆಸ್ತಿ ಏನೆಂದರೆ, ಒಂದು ಸಣ್ಣ ಮನೆ, ಒಂದು ಪುಟ್ಟ ತೋಟ, ಮೂವತ್ತು ಯೋಕ್ (Yolk) ನಷ್ಟು ಸಾಗುವಳಿ ಜಮೀನು ಮತ್ತು ಸ್ವಲ್ಪ ಹುಲ್ಲುಗಾವಲು. ಆಂಟೋನನು ತನ್ನ ಜಮೀನಿಗೆ ಮಾಲೀಕನಾದರೂ ಹಳೆಯ ಸೈನಿಕ ಉಂಬಳಿಯ (Feudal) ನಿಯಮಗಳಿಗೆ ಬದ್ಧನಾ ಗಿದ್ದನು. ಅದರ ಪ್ರಕಾರ ತನ್ನ ಹಳ್ಳಿಯನ್ನು ಬಳಸಿದಂತಿದ್ದ ಜಹಗೀರುದಾರನ ಫಲವತ್ತಾದ ಜಮೀನಿನಲ್ಲಿ ಬಿಟ್ಟಿ ಬೇಗಾರಿ (Corvee)ಯಾಗಿ ವಾರಕ್ಕೆ ಮೂರು ದಿನಗಳು ದುಡಿಯ ಬೇಕಾಗಿತ್ತು. ಈ ಬಗೆಯ ದಾಸ್ಯವೊಂದು ಅವನ ಜೀವನವನ್ನು ಜಗ್ಗುತ್ತಿತ್ತು. ಇದರಿಂದ ಅವನಿಗೆ ಹೆಚ್ಚು ವಿರಾಮ ದೊರಕು ತ್ತಿರಲಿಲ್ಲ. ಆದರೂ ಬಿಡುವುಮಾಡಿಕೊಂಡು ತನ್ನ ಜಮೀನಿನ ಬೇಸಾಯದ ಕಡೆಗೂ ಗಮನ ಕೊಡುತ್ತಿದ್ದನು.

ಆಂಟೋನ್ ದಂಪತಿಗಳಿಗೆ ಮೂರು ಜನ ಮಕ್ಕಳು. ಎರಡು ಹೆಣ್ಣು, ಒಂದು ಗಂಡು. ವೆರೋನಿಕ (Veronika) ಹಿರಿಯ ಮಗಳು, ಯೋಹನ್ (Johann) ಎರಡನೆಯವನು ಮತ್ತು ಥೆರೇಸಿಯಾ (Theresia) ಕಿರಿಯವಳು. ಯೋಹನ್ ಹುಟ್ಟಿದ್ದು ೧೮೨೨ನೇ ಜುಲೈ ೨೨ರಲ್ಲಿ. ಇವನನ್ನು ಪ್ರೀತಿವಾತ್ಸಲ್ಯದಿಂದ "ಹಾನ್ಜೆಲ್" (Hanzl) ಎಂದೇ ಸಂಬೋಧಿಸಿ ಕರೆಯು ತ್ತಿದ್ದರು. ಮಕ್ಕಳಲ್ಲಿ ಇವನೊಬ್ಬನೇ ಗಂಡುಮಗನಾಗಿದ್ದು ದರಿಂದ ತಂದೆತಾಯಿಗಳಿಗೆ ಇವನಮೇಲೆ ಅತ್ಯಂತ ಪ್ರೀತಿ. ಅವನ ಆಟಪಾಟಗಳನ್ನು ನೋಡಿ ಅವರು ಹಿರಿ ಹಿರಿ ಹಿಗ್ಗು

ತ್ತಿದ್ದರು. ಅವನ ಸಂಬಂಧವಾಗಿ ಸುಖ ಮತ್ತು ಸಂಪದ್ಭರಿತ ವಾದ ಕಲ್ಪನೆಯ ರಾಜ್ಯವನ್ನು ಕನಸಿನಲ್ಲಿ ಕಟ್ಟಿಕೊಳ್ಳು ತ್ತಿದ್ದರು. ಸಂಜೆಯ ವೇಳೆ ಆಂಟೋನನು ತನ್ನ ನಿವಾಸದ ಬಳಿಯಲ್ಲಿದ್ದ ತೋಟದಲ್ಲಿ ಕೆಲಸಮಾಡುತ್ತಿದ್ದಾಗ ಆಟವಾಡಲು ಬಂದ ಮಗನನ್ನು ಕಂಡರೆ ಅವನ ದಿನದ ಆಯಾಸವೆಲ್ಲಾ ಮಾಯವಾಗುತ್ತಿತ್ತು.

ತಂದೆತಾಯಿಗಳು ಆರೇಳು ವರ್ಷಗಳು ತುಂಬಿದ ಯೋಹ ನನ್ನು ತಮ್ಮ ಹಳ್ಳಿಯಲ್ಲಿಯೇ ಇದ್ದ ಪಾಠಶಾಲೆಗೆ ಸೇರಿಸಿದರು. ಆ ಪಾಠಶಾಲೆಯು ಆ ಹಳ್ಳಿಯ ಜಹಗೀರುದಾರಿಣಿ ವಾಲ್ಡ್ ಬುರ್ಗಿನ ಶ್ರೀಮಂತೆ(Countess of Waldburg)ಯ ಕೃಪಾ ಪೋಷಣೆಯಲ್ಲಿತ್ತು. ಈಕೆಯು ಪ್ರಕೃತಿವಿಜ್ಞಾನದ ಆವಶ್ಯಕತೆ ಯನ್ನರಿತು ಪ್ರಾಥಮಿಕ ತರಗತಿಗಳಿಂದಲೂ ಮಕ್ಕಳಿಗೆ ಪ್ರಕೃತಿ ವಸ್ತುಗಳ ಬಗ್ಗೆ ಬೋಧನೆಯ ಏರ್ಪಾಡು ಮಾಡಿಸಿದ್ದಳು. ಈ ಬಗೆಯ ಸ್ವಯಂಪ್ರೇರಿತ ಬೋಧನಾಕ್ರಮಕ್ಕೆ ಆ ಪ್ರಾಂತದ ವಿದ್ಯಾಧಿಕಾರಿಗಳಾದ ಫಾಟೆರ್ ಫ್ರೀಡಲ್(Pater Friedl) ರವರ ಅಪ್ಪಣೆ ಅಥವಾ ಆಶೀರ್ವಾದಗಳಿರಲಿಲ್ಲ. ಇದನ್ನು ಹಲವಾರು ಬಾರಿ ಅವರು "ನಾಚಿಕೆಗೇಡು" ಎಂದು ಕರೆದದ್ದೂ ಉಂಟು.

ಆ ಪ್ರಾಥಮಿಕ ಶಾಲೆಯ ಉಪಾಧ್ಯಾಯರು ಮಕ್ಕಳಲ್ಲಿ ವಿದ್ಯಾಭ್ಯಾಸದ ಬಗ್ಗೆ ಆಸಕ್ತಿ ಅಭಿರುಚಿಗಳನ್ನು ಹುಟ್ಟಿಸುವ ಪ್ರವೃತ್ತಿಯುಳ್ಳವರಾಗಿದ್ದರು. ಮಕ್ಕಳನ್ನು ಬಯಲಿಗೆ ಕರೆದು ಕೊಂಡು ಹೋಗಿ ಪ್ರಕೃತಿಯ ವಸ್ತುಗಳ ಪರಿಚಯವನ್ನು ಮಾಡಿಕೊಡುತ್ತಿದ್ದರು. ಉತ್ತಮ ಜಾತಿಯ ಹಣ್ಣಿನ ಗಿಡ ಗಳನ್ನು ಬೆಳೆಸುವ ಮತ್ತು ಜೇನು ಸಾಕುವ ವಿಧಾನಗಳನ್ನು

ಪ್ರಾಯೋಗಿಕವಾಗಿ ಹೇಳಿಕೊಡುತ್ತಿದ್ದರು. ಈ ಕಾರಣದಿಂದ ಯೋಹನನ ಮೇಲೆ ಗುರುಗಳ ಮಹತ್ಪ್ರಭಾವ ತನ್ನ ಮುದ್ರೆಯ ನ್ನೊತ್ತಿತ್ತು. ತಂದೆಯಂತೆ ರೈತನಾಗುವುದರ ಜತೆಗೆ ವಿದ್ಯಾ ವಂತನಾಗಬೇಕೆಂಬ ಮನೋಭಿಲಾಷೆ, ಮಹದಾಕಾಂಕ್ಷೆ, ದೃಢ ಸಂಕಲ್ಪವಾಗಿ ಆ ಬಾಲಕನಲ್ಲಿ ಬೇರೂರಿ ಬೆಳೆಯಲಾರಂಭಿಸಿತು. ಏಕಾಗ್ರಚಿತ್ತದಿಂದ ಪಾಠಪ್ರವಚನಗಳನ್ನು ಕೇಳುತ್ತಿದ್ದ ಯೋಹನನನ್ನು ಕಂಡರೆ ಉಪಾಧ್ಯಾಯರಿಗಂತೂ ತುಂಬಾ ಪ್ರೀತಿ.

ಪಾಠ ಮುಗಿಸಿ ಮನೆಗೆ ಹಿಂದಿರುಗಿದಮೇಲೆ ಯೋಹನನು ಕಲಿತ ಪಾಠವನ್ನೆಲ್ಲವನ್ನೂ ತಂದೆತಾಯಿಗಳಿಗೆ ತಿಳಿಸುತ್ತಿದ್ದನು. ಮಗನ ಮೇಧಾಶಕ್ತಿ, ಗ್ರಹಣಶಕ್ತಿ, ಕಲಿಕೆಯ ಮಹದಾಕಾಂಕ್ಷೆ ಗಳೆಲ್ಲವನ್ನೂ ಕಂಡ ತಂದೆತಾಯಿಗಳು ಆನಂದಭರಿತರಾಗು ತ್ತಿದ್ದರು. ಸ್ವಪ್ನ ಸಾಮ್ರಾಜ್ಯದಲ್ಲಿ ಅವನ ವಿಖ್ಯಾತ ಭವಿಷ್ಯವನ್ನು ಹೆಣೆಯುತ್ತಿದ್ದರು. ತಾಯಿಯು ಮಗನು ವಿದ್ಯಾವಂತನಾಗಿ ಕೀರ್ತಿಗಳಿಸುವನೆಂದು ಕನಸುಕಾಣುತ್ತಿದ್ದಳು. ಮಗನ ಶ್ರೇಯಸ್ಸಿಗಾಗಿ ಹಗಲಿರುಳು ದೇವರಲ್ಲಿ ಪ್ರಾರ್ಥನೆ ಸಲ್ಲಿಸು ತ್ತಿದ್ದಳು. ತಂದೆಗಾದರೋ ವಂಶಾನುಗತವಾಗಿ ಬಂದ ರೈತಾಪಿ ಜೀವನದಲ್ಲಿ ಮಮತೆ ವ್ಯಾಮೋಹಗಳಿದ್ದರೂ ಬೇರೆಯವರ ತೋಟದಲ್ಲಿ ಬಿಟ್ಟಿ ಬೇಗಾರಿಯಾಗಿ ದುಡಿಯುವ ದಾಸ್ಯವು ಮಗನ ಪಾಲಿಗೂ ಎಲ್ಲಿ ಬಂದುಬಿಡುವುದೋ ಎಂಬ ಶಂಕೆ, ಹೆದರಿಕೆ, ಚಿಂತೆಯೊಂದು ಕಡೆ. ಮಗನು ವಿದ್ಯಾವಂತನಾದರೆ ವಿದ್ಯೆಯೇ ಮಗನನ್ನು ಸುಖದ ದಾರಿಗೆ ಕರೆದೊಯ್ಯುವುದೆಂಬ ನಿರೀಕ್ಷೆ ಮತ್ತು ಹೆಬ್ಬಯಕೆ ಇನ್ನೊಂದು ಕಡೆ.

ಆಂಟೋನ್ ಮೆಂಡೆಲ್‌ನಿಗೆ ಸೇಬು ಮೊದಲಾದ ಹಣ್ಣಿನ

ಗಿಡಗಳನ್ನು ಬೆಳೆಯುವುದು ಮತ್ತು ಅವುಗಳನ್ನು ಉತ್ತಮ ಗೊಳಿಸುವುದೆಂದರೆ ತುಂಬಾ ಮಮತೆ. ಇದರ ಜೊತೆಗೆ ಜೇನು ಸಾಕುವುದು ಮತ್ತೊಂದು ಹವ್ಯಾಸ. ಮುಂಜಾನೆ ಮತ್ತು ಸಂಜೆಯಲ್ಲಿ ತನ್ನ ತೋಟದಲ್ಲಿ ಕೆಲಸಮಾಡಿ ಉಳಿದ ಹಗಲಲ್ಲೆಲ್ಲಾ ಜಹಗೀರುದಾರಿಣಿಯ ಗದ್ದೆ ಮತ್ತು ತೋಟ ಗಳಲ್ಲಿ ಅನಿವಾರ್ಯವಾಗಿ ಕೆಲಸಮಾಡಲು ಹೋಗಬೇಕಾಗಿದ್ದುದ ರಿಂದ, ತನ್ನ ಕೃಷಿ ಕೆಲಸವನ್ನು ಬೇಗ ಮುಗಿಸುವ ಯೋಚನೆ ಯಿಂದ ಮತ್ತು ಮಗನಲ್ಲಿಯೂ ತೋಟಗಾರಿಕೆಯ ಆಸಕ್ತಿ ಯನ್ನು ಹುಟ್ಟಿಸುವ ಸದುದ್ದೇಶದಿಂದ, ಆಗಾಗ್ಗೆ ಮಗನಿಗೆ ವಿರಾಮ ದೊರೆತಾಗಲೆಲ್ಲಾ ತನಗೆ ನೆರವಾಗುವಂತೆ ಮಗನನ್ನು ಕರೆಯುತ್ತಿದ್ದನು. ತಂದೆಯೊಡನೆ ಕೆಲಸಮಾಡುವುದೆಂದರೆ ಮತ್ತು ಅವನಿಗೆ ನೆರವಾಗುವುದೆಂದರೆ ಯೋಹನನಿಗೂ ಸಂತೋಷ. ಕರೆದೊಡನೆಯೇ ಎಲ್ಲಾ ಕೆಲಸವನ್ನೂ ಆಟಪಾಟ ಗಳನ್ನೂ ಬದಿಗೊತ್ತಿ ತೋಟಕ್ಕೆ ಓಡುತ್ತಿದ್ದನು. ಆದುದರಿಂದ ಯೋಹನನಿಗೆ ಬಾಲ್ಯದಿಂದಲೇ ತಂದೆಯೊಡನೆ ತೋಟಕ್ಕೆ ಹೋಗುವುದು, ತಂದೆಯ ಕಾರ್ಯದಲ್ಲಿ ನೆರವಾಗುವುದು ಹವ್ಯಾಸ ವಾಗಿತ್ತು ಮತ್ತು ತಂದೆಯು ಆಗಾಗ್ಗೆ ಹಳೆಯ ಗಿಡಗಳ ಮೇಲೆ ಉತ್ತಮ ಜಾತಿಯ ಪ್ರಭೇದಗಳನ್ನು ಕಸಿಮಾಡುವ ವಿಧಾನಗಳನ್ನು ಆಸಕ್ತಿಯಿಂದ ಮತ್ತು ಕುತೂಹಲದಿಂದ ನೋಡುವುದು—ಅವನ ನಿತ್ಯ ದಿನಚರಿಯಾಗಿತ್ತು. ಹೀಗಾಗಿ ದಿನಗಳುರುಳಿದಂತೆಲ್ಲಾ ಯೋಹನನಿಗೆ ತೋಟಗಾರಿಕೆಯಲ್ಲಿ ವ್ಯಾಮೋಹ ಹೆಚ್ಚಿತು.

ಅಲ್ಲದೆ ಆ ಪ್ರದೇಶದಲ್ಲಿದ್ದ ಯೋಹನ್ ಶ್ರೈಬೆರ್ (Johann Schreiber) ಎಂಬ ಪ್ಯಾರಿಷ್ ಪಾದ್ರಿಗಳು ವಾಲ್ಡಬುರ್ಗ್

ಜಹಗೀರುದಾರಿಣಿಯ ತೋಟಗಳಿಂದ ಜನರಿಗೆ ಉತ್ತಮ ಜಾತಿಯ ಗಿಡದ ಕಸಿಕುಡಿಗಳನ್ನು ಒದಗಿಸಿ ಉತ್ತಮ ದರ್ಜೆಯ ಹಣ್ಣು ಗಿಡಗಳನ್ನು ಬೆಳೆಸಲು ಪ್ರೋತ್ಸಾಹಿಸುತ್ತಿದ್ದರು. ಊರಿನ ಹಿರಿಯ ಮತ್ತು ಕಿರಿಯ ಜನರೆಲ್ಲರಿಗೂ ಕಸಿಮಾಡುವ ವಿಧಾನಗಳನ್ನು ಪ್ರಾಯೋಗಿಕವಾಗಿ ತೋರಿಸಿಕೊಡುತ್ತಿದ್ದರು; ಅಲ್ಲದೆ ಸಲಹೆಯನ್ನು ನೀಡುತ್ತಿದ್ದರು, ತಿಳಿವಳಿಕೆ ಕೊಡುತ್ತಿದ್ದರು. ಇದರಿಂದ ಆ ಹಳ್ಳಿಯ ಸುತ್ತುಮುತ್ತಲಿನ ಜನರಿಗೆ ಕಸಿಕಟ್ಟುವುದರಲ್ಲಿ ತುಂಬಾ ಆಸಕ್ತಿ ಬೆಳೆಯುತ್ತಿತ್ತು.

ಶ್ರೈಬೆರ್ ಪಾದ್ರಿಯವರಿಂದ ಪ್ರೇರಿತರಾದವರಲ್ಲಿ ಯೋಹನ್ ಮೆಂಡೆಲ್‌ನ ಉಪಾಧ್ಯಾಯರಾದ ಮಾಕಿಟ್ಟ(Makitta)ನೂ ಒಬ್ಬ. ಇವನು ಪಾಠಶಾಲೆಯಲ್ಲಿ ಒಂದು ದಿನ ಪಾಠಮಾಡುತ್ತಿದ್ದಾಗ ಗಿಡಗಳಲ್ಲಿ ಕಸಿಮಾಡುವ ಪ್ರಸ್ತಾಪ ಬಂತು. ಅದರ ಮಹತ್ವವನ್ನು ವಿವರಿಸುತ್ತಾ "ಸಸ್ಯಗಳಲ್ಲಿ ಕಸಿಮಾಡುವಾಗ, ಒಂದು ಗಿಡದ ಕಾಂಡದಲ್ಲಿ ಒಂದು ಸೀಳುಮಾಡಿ, ಅದರಲ್ಲಿ ಇಚ್ಛಿಸಿದ ಗಿಡದ ಕಸಿಕುಡಿ ಅಥವಾ ಕಸಿಕೊಂಬೆಯನ್ನು ಸೇರಿಸಿ, ಅದು ಒಣಗದಂತೆ ಅದರ ಸುತ್ತ ಬಟ್ಟೆ ಅಥವಾ ಗರಿಯಿಂದ ಸುತ್ತಿ ರಕ್ಷಿಸಬೇಕು. ಕಾಲಕ್ರಮೇಣ ಮೂಲಗಿಡದಿಂದ ಕಸಿಕುಡಿಯು ಸಾರವನ್ನು ಪಡೆದು, ಚಿಗುರಿ, ಅವಿಚ್ಛಿನ್ನವಾದ ರೆಂಬೆಯಾಗಿ ಬೆಳೆಯುತ್ತದೆ; ಒಂದು ಉತ್ತಮವರ್ಗದ ಕಸಿಕುಡಿಯನ್ನು ದುರ್ಬಲ ಗಿಡದ ರೆಂಬೆಯ ಮೇಲೆ ಕಸಿಮಾಡಿದರೆ, ಅದು ದುರ್ಬಲವಾದ ತಾಯಿ ಗಿಡದಿಂದ ಸಾರವನ್ನು ಪಡೆದು ಉತ್ತಮ ಗಿಡವಾಗಿ ಬೆಳೆಯುತ್ತದೆ; ಅಲ್ಲದೆ ಉತ್ತಮ ಫಲವನ್ನೂ ಬಿಡುತ್ತದೆ" ಎಂದು ಹೇಳಿದನು. ಗಮನವಿಟ್ಟು ಈ ವಿಷಯವನ್ನು ಕೇಳಿದ ಹತ್ತು ವರ್ಷದ ಚುರುಕುಮತಿಯ

ಯೋಹನ್ ಮೆಂಡೆಲ್‌ನಿಗಂತೂ ಈ ಸತ್ಯಾಂಶದ ಪರಿಣಾಮ ಕ್ರಮ ಅರ್ಥವಾಗಲಿಲ್ಲ.

ಇದು ಹೇಗೆ ಸಾಧ್ಯವೆಂಬ ಅಭೇದ್ಯವಾದ ಸಮಸ್ಯೆಯನ್ನು ಮನೆಗೆ ಮನಸ್ಸಿನಲ್ಲಿಯೇ ತಂದನು. ತಂದೆಯೊಡನೆ ಚರ್ಚೆ ಮಾಡಿ ಅದನ್ನು ಅರ್ಥಮಾಡಿಕೊಳ್ಳುವವರೆಗೂ ಅವನಿಗೆ ಸಮಾಧಾನವಿರುತ್ತಿರಲಿಲ್ಲ; ಮನಸ್ಸಿನಲ್ಲಿ ನೆಮ್ಮದಿಯಿರುತ್ತಿರಲಿಲ್ಲ. ಯಾವ ಅರ್ಥವಾಗದ ಸಮಸ್ಯೆಯಾದರೂ ತಂದೆ ತಾಯಿಯರ ಅಥವಾ ಗುರುಹಿರಿಯರ ನೆರವಿನಿಂದ ಬಗೆಹರಿಸಿಕೊಳ್ಳಬೇಕು. ಆಗಲೇ ಅವನಿಗೆ ನೆಮ್ಮದಿ. ಇದು ಅವನ ಹುಟ್ಟುಗುಣ. ಮಾಕಿಟ್ಟನು ಹೇಳಿದ ಕಸಿ ಕಟ್ಟುವ ಪ್ರಕರಣವನ್ನು ಸುಲಭ ರೀತಿಯಲ್ಲಿ ವಿವರಿಸುವಂತೆ ತಂದೆಯನ್ನು ಕೇಳಿದನು. ಆಂಟೋನನು ಮಗನ ಮನಸ್ಸಿನಲ್ಲಿದ್ದ ಸಮಸ್ಯೆಯನ್ನು ಅರಿತುಕೊಂಡನು. ಅದಕ್ಕೆ ಅವನು "ನೋಡು, ಹಾನ್ಜೆಲ್! ಈ ವಾಸ್ತವಿಕ ಅಂಶ ನನಗೂ ಅರ್ಥವಾಗುವುದಿಲ್ಲ. ಇದು ಪ್ರಕೃತಿಯ ನಿಯಮ. ಇದನ್ನೇ ನಾವು ಆನುವಂಶೀಯತೆಯೆಂದು ಕರೆಯುತ್ತೇವೆ. ಇದರ ರೀತಿ ನೀತಿಗಳು ಕಲ್ಪನಾತೀತ. ಅಂತೂ ಇಷ್ಟನ್ನು ಮಾತ್ರ ಈಗ ಹೇಳಬಹುದು. ಆನುವಂಶೀಯತೆಯು ಪೌಷ್ಟಿಕ ವಾತಾವರಣಕ್ಕಿಂತ ಶಕ್ತಿಯುತವಾದದ್ದು. ಈ ಧರ್ಮವು ಮನುಷ್ಯನೇ ಮೊದಲಾದ ಎಲ್ಲಾ ಜೀವರಾಶಿಗಳಲ್ಲಿಯೂ ಹುದುಗಿದೆ, ವ್ಯಾಪಿಸಿದೆ. ಉತ್ತಮ ವಂಶದ ತಂದೆತಾಯಿಗಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಬಡತನದ ಸನ್ನಿವೇಶದಲ್ಲಿ ಬೆಳೆದರೂ ಉತ್ತಮರಾಗಿಯೇ ಬೆಳೆಯುತ್ತಾರೆ. ಅಂದರೆ, ನಿಮ್ಮ ಉಪಾಧ್ಯಾಯರು ಕೊಟ್ಟ ಉದಾಹರಣೆಯನ್ನೇ ತೆಗೆದುಕೊಂಡರೆ ಉತ್ತಮ ಜಾತಿಯ

ಕಸಿ ಕೊಂಬೆಯನ್ನು ದುರ್ಬಲವಾದ ಗಿಡದಮೇಲೆ ಕಸಿಮಾಡಿ ಬೆಳೆಸಿದರೆ ಉತ್ತಮ ಜಾತಿಯ ರೆಂಬೆಯಾಗಿಯೇ ಬೆಳೆಯುತ್ತದೆ" ಎಂದು ತನ್ನ ಅನುಭವದ ಮಾತನ್ನು ಮಗನಿಗೆ ಹೇಳಿದನು. ತಂದೆಯು ಹೇಳುತ್ತಿದ್ದ ಅಸಾಧಾರಣವಾದ ಪ್ರಕೃತಿಲೀಲೆಯ ವೈಚಿತ್ರ್ಯವನ್ನು ಕೇಳುತ್ತಿದ್ದ ಬಾಲಕ ಯೋಹನನು ಮಂತ್ರ ಮುಗ್ಧನಂತೆ ಬಿಚ್ಚುಗಣ್ಣಿನಿಂದ ನಿಂತಿದ್ದನು.

ತಂದೆಯು ಕೊಟ್ಟ ಆನುವಂಶೀಯತೆಯ ಮರ್ಮಧರ್ಮಗಳ ಅದ್ಭುತ ಲೀಲೆಯ ವಿವರಣೆಯು ಮಗನನ್ನು ಚಕಿತಗೊಳಿಸಿತು. ಇದು ಅವನ ಮನಸ್ಸಿನಲ್ಲಿ ಗಾಢವಾಗಿ ಬೇರೂರಿತು. ವಿವಿಧ ಬಗೆಯ ಹೂವು, ಕಾಯಿ, ಎಲೆ, ಮರಗಳ ವರ್ಣ ಮತ್ತು ರಚನೆಗಳಿಗೆ ಪ್ರೇರಣೆಗಳಾವುವು? ಅವುಗಳ ಸ್ವರೂಪವೇನು? ಪ್ರಕೃತಿಯ ರೀತಿಯ ಜಾಡನ್ನು ಹಿಡಿದು ನೀತಿಯನ್ನೂ ಮತ್ತು ತತ್ವವನ್ನೂ ಕಾಣಬೇಕೆಂಬ ಹಿರಿದಾದ ಆಸೆ ಹೆಚ್ಚಿತು. ದೃಢಸಂಕಲ್ಪ ಮನಸ್ಸಿನಲ್ಲಿ ಬೇರೂರಿತು.

ಯೋಹನ್ ಮೆಂಡೆಲ್‌ನ ಅಸಾಧಾರಣ ಮೇಧಾಶಕ್ತಿ, ವಿದ್ಯಾರ್ಜನೆಯಲ್ಲಿದ್ದ ಪ್ರಬಲವಾದ ಆಸಕ್ತಿಗಳನ್ನು ಅರಿತು ಮನಗಂಡಿದ್ದ ಹಾನ್ಜೆಲ್‌ನ ಉಪಾಧ್ಯಾಯರು ಅವುಗಳನ್ನು ನಂದಿಸಬಾರದೆಂದು ತಂದೆತಾಯಿಗಳಿಗೆ ಮಗನನ್ನು ಮುಂದಿನ ವಿದ್ಯಾಭ್ಯಾಸಕ್ಕೆ ಕಳುಹಿಸಲೇಬೇಕೆಂದು ಬಲಾತ್ಕರಿಸಿದರು, ಪ್ರೋತ್ಸಾಹಿಸಿದರು. ಅಲ್ಲದೆ ಸೂಕ್ತ ಏರ್ಪಾಡುಗಳನ್ನೂ ಮಾಡಿದರು. ಅದರ ಪ್ರಕಾರ ಹೈನ್‌ಜೆನ್‌ಡೋರ್ಫ್‌ಗೆ ಇಪ್ಪತ್ತು ಹೈನ್‌ಜೆನ್ ಡೋರ್ಫ್ ಕಿಲೋಮೀಟರು ದೂರವಿರುವ ಲೈಪ್ನಿಕ್ (Leipnik) ಎಂಬ ಊರಿನಲ್ಲಿದ್ದ ಪಾಠಶಾಲೆಗೆ ಯೋಹನ್‌ನನ್ನು ಸೇರಿಸಿದರು. ಆಗ ಅವನಿಗೆ ಕೇವಲ ಹತ್ತು ವರ್ಷಗಳಾಗಿತ್ತು.

ಲೈಪ್ನಿಕ್‌ನ ಪಾಠಶಾಲೆಯಲ್ಲಿ ಎರಡು ವರ್ಷಗಳ ಕಾಲ ಯೋಹನ್‌ನನು ವಿದ್ಯಾವ್ಯಾಸಂಗವನ್ನು ಮಾಡಿದನು. ಹುಡುಗನ ಸದ್ವರ್ತನೆ, ವಿಧೇಯತೆ, ಧೀಮಂತಿಕೆ ಮತ್ತು ಗ್ರಹಣ ಶಕ್ತಿ—ಇವನ್ನು ಕಂಡ ಉಪಾಧ್ಯಾಯರು ಸಂತುಷ್ಟರಾದರು. ಅಂತೂ ವಿದ್ಯಾಭ್ಯಾಸ ಸುಗಮವಾಗಿ ಸಾಗಿತು; ಅದು ಕೊನೆಯಲ್ಲಿ ಯಶಸ್ವಿಯಾಗಿ ಮುಕ್ತಾಯಗೊಂಡಿತು. ತರಗತಿಯ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯನ್ನು ಪಡೆದು ತೇರ್ಗಡೆ ಹೊಂದಿದನು. ಇದಾದಮೇಲೆ ಊರಿಗೆ ಹಿಂತಿರುಗಿದನು.

ಕೆಲವು ದಿನಗಳಮೇಲೆ ಮುಂದಿನ ವ್ಯಾಸಂಗಕ್ಕೆ ಬೇರೊಂದು ಊರಿಗೆ ಹೋಗಬೇಕಾಗಿತ್ತು. ಅದರ ಪ್ರಕಾರ ತನ್ನ ತೌರೂರಿಗೆ ಮೂವತ್ತು ಕಿಲೋಮೀಟರಿಗಿಂತಲೂ ದೂರದಲ್ಲಿದ್ದ ಟ್ರೋಪೌ (Troppau) ಎಂಬ ಊರಿನ ಪ್ರೌಢಶಾಲೆಗೆ ೧೮೩೪ರ ಕೊನೆಯಲ್ಲಿ ಸೇರಿ ತನ್ನ ವ್ಯಾಸಂಗವನ್ನು ಮುಂದುವರಿಸಿದನು.

ಟ್ರೋಪೌ ಊರಿನಲ್ಲಿ ಯೋಹನ್ ಮೆಂಡೆಲ್‌ನ ಆರು ವರ್ಷದ ವಿದ್ಯಾರ್ಥಿಜೀವನ ಬಲು ಕಷ್ಟತಮವಾಗಿತ್ತು. ತಂದೆತಾಯಿಗಳ ಆರ್ಥಿಕ ಪರಿಸ್ಥಿತಿ ಹೀನವಾಗಿತ್ತು. ತಂದೆಯು ತನ್ನ ಉಳಿತಾಯದ ಹಣವೆಲ್ಲವನ್ನೂ ಬೇಸಾಯವನ್ನು ಉತ್ತಮಗೊಳಿಸುವುದರಲ್ಲಿಯೇ ವಿನಿಯೋಗಿಸಬೇಕಾಗಿತ್ತು. ಇದರಿಂದ ಜೀವನೋಪಾಯ ಮಾಡಿಕೊಂಡು ಪಾಠಶಾಲೆಯ ಶುಲ್ಕವನ್ನು ಕೊಡುವುದು ತಂದೆಗೆ ಸುಲಭಸಾಧ್ಯವಾಗಿರಲಿಲ್ಲ. ಹನ್ನೆರಡು ವರ್ಷದ ಬಾಲಕನಿಗಂತೂ ಊಟವಸತಿಗಳ ಏರ್ಪಾಡು ಸಮರ್ಪಕವಾಗಿರಲಿಲ್ಲ. ಮನೆಯಿಂದ ಸಾಕಷ್ಟು ಹಣ ಬಾರದಿದ್ದರೆ ಪಾಠಶಾಲೆಯ ಶುಲ್ಕವನ್ನು ತೆರುವುದು ಒಂದು ದೊಡ್ಡ ಸಮಸ್ಯೆಯಾಗಿಯೇ ಉಳಿಯಿತು. ತಂದೆತಾಯಿಗಳಾದರೋ

ಮಗನ ಆಹಾರಕ್ಕೆ ತೊಂದರೆಯಾಗದಿರಲೆಂದು ತಮ್ಮ ಊರಿನಿಂದ ಟೋಪೌ ಊರಿಗೆ ಕುದುರೆಗಾಡಿಗಳು ಹೋಗುವಾಗಲೆಲ್ಲಾ ಬೆಣ್ಣೆ ಮತ್ತು ಬ್ರೆಡ್ಡನ್ನು ಕಳುಹಿಸುತ್ತಿದ್ದರು. ಆದರೆ ಈ ಆಹಾರ ಅವನಿಗೆ ನಿಯತವಾಗಿ ತಲುಪುತ್ತಿರಲಿಲ್ಲ. ಅಂತಹ ಕಠಿನ ಸನ್ನಿವೇಶಗಳಲ್ಲಿ ಜೀವನ ಸಾಗಿಸುವುದು ಯೋಹನ್‌ನಿಗೆ ಕಷ್ಟವೆನಿಸಿತು. ಹಲವಾರು ದಿನಗಳಲ್ಲಿ ಅನಿವಾರ್ಯದ ಅರೆ ಹೊಟ್ಟೆಯ ಜೀವನವಾಯಿತು. ಮತ್ತೆ ಕೆಲವು ದಿನಗಳು ವಿಧಿಯಿಲ್ಲದೆ ಉಪವಾಸದಿಂದಿರಬೇಕಾಯಿತು. ಇದರ ಪರಿಣಾಮವಾಗಿ ದೇಹ ಕೃಶವಾಯಿತು; ಮತ್ತು ಆರೋಗ್ಯ ಕೆಟ್ಟಿತು. ಶಾಲೆಗೆ ರಜ ಬಂದ ಕಾಲದಲ್ಲಿ ಊರಿಗೆ ಹಿಂತಿರುಗಿ ಚೇತರಿಸಿಕೊಳ್ಳಬೇಕಾಗಿತ್ತು. ಇಂತಹ ಪ್ರತಿಯೊಂದು ಸಂದರ್ಭದಲ್ಲಿಯೂ ತಂದೆಯ ಬೇಸಾಯಕಾರ್ಯದಲ್ಲಿ ಪಾಲ್ಗೊಳ್ಳುವುದು ತಪ್ಪುತ್ತಿರಲಿಲ್ಲ. ಸುಗ್ಗಿಯ ಕಾಲದಲ್ಲಂತೂ ವಿರಾಮವೇ ಸಿಗುತ್ತಿರಲಿಲ್ಲ.

ಮಾನವನ ಜೀವಮಾನದಲ್ಲಿ ದುಃಖಗಳು ಒಂಟಿಯಾಗಿ ಬರುವುದಿಲ್ಲ. ಅರೆಹೊಟ್ಟೆಯ ಜೀವನದಿಂದ ಕಾಯಿಲೆಗೆ ತುತ್ತಾಗಿ ೧೮೩೯ರಲ್ಲಿ ಒಮ್ಮೆ ಯೋಹನನು ಮನೆಗೆ ಹಿಂತಿರುಗಿದ್ದನು. ಇಂತಹ ಸಂದರ್ಭದಲ್ಲಿ ಅವನ ತಂದೆಯು ಒಂದು ಅಪಘಾತಕ್ಕೆ ತುತ್ತಾದನು. ಚಳಿಗಾಲದ ಒಂದು ದಿನ ಜಹಗೀರುದಾರಿಣಿಯ ಎಸ್ಟೇಟಿನಲ್ಲಿ ಒಂದು ಮರವನ್ನು ಕಡಿಯುತ್ತಿದ್ದಾಗ, ಅದು ಅಕಸ್ಮಾತ್ತಾಗಿ ಎದೆಯ ಮೇಲೆ ಬಿದ್ದುಬಿಟ್ಟಿತು. ತುಂಬಾ ಪೆಟ್ಟಾಯಿತು. ತತ್ಪರಿಣಾಮವಾಗಿ ತನ್ನ ಬೇಸಾಯದ ಕೆಲಸವನ್ನು ಮುಂದುವರಿಸುವುದು ಅಸಾಧ್ಯವಾಯಿತು. ಕೃಷಿಯನ್ನು ಬಿಡುವುದು ಅನಿವಾರ್ಯವಾಯಿತು. ಇದ್ದ ತೋಟವನ್ನು

ಅಳಿಯನಿಗೆ ಮಾರಿಬಿಟ್ಟು, ತನಗೆ ಬರುತ್ತಿದ್ದ ವಿಶ್ರಾಂತಿವೇತನ ದಿಂದಲೇ ಜೀವನ ಸಾಗಿಸತೊಡಗಿದನು. ಜಮೀನಿನಿಂದ ಬಂದಿದ್ದ ಉತ್ಪತ್ತಿ ಮತ್ತು ಮಾರಿಬಂದ ಸಾಕಷ್ಟು ಹಣವನ್ನು ಮಗನಿಗೂ ಮತ್ತು ಆಗಿನ್ನೂ ಅವಿವಾಹಿತೆಯಾಗಿದ್ದ ಎರಡನೇ ಮಗಳಾದ ಥೆರೇಸಿಯಾವಿಗೂ ಹಂಚಿಬಿಟ್ಟನು.

ತಂದೆಯ ಆದಾಯ ಕಡಮೆಯಾಗಿ ಅವನ ಗೃಹಕೃತ್ಯದ ಖರ್ಚು ಅಧಿಕಗೊಂಡಮೇಲೆ ಯೋಹನ್‌ಗೆ ಒದಗುತ್ತಿದ್ದ ಆರ್ಥಿಕ ಸಹಾಯಕ್ಕೆ ಅಡ್ಡಿಯಾಯಿತು. ಆರೇಳು ತಿಂಗಳು ಕಾಲ ಊರಿನಲ್ಲಿಯೇ ಇದ್ದು, ತಂದೆಯ ಶುಶ್ರೂಷೆಯನ್ನು ಮಾಡಿ, ಅನಂತರ ಪಾಠಶಾಲೆಗೆ ಹಿಂತಿರುಗಿದನು.

ಟ್ರೋಪೌವಿಗೆ ಹಿಂತಿರುಗಿದಮೇಲೆ ಹದಿನಾರು ವರ್ಷದ ಯೋಹನ್‌ನನಿಗೆ ಜೀವನದ ಸಮಸ್ಯೆ ಭೈರವರೂಪವನ್ನು ತಾಳಿತು. ಹೊಟ್ಟೆಪಾಡಿನ ಗತಿಯೇನು? ಶಾಲೆಯ ಫೀಜು ತೆರುವುದೆಂತು? ಮೇಲಾಗಿ ನಿತ್ಯದ ಪಾಠಪ್ರವಚನಗಳನ್ನು ಸಮರ್ಪಕವಾಗಿ ಅಭ್ಯಸಿಸುವುದು ಹೇಗೆ? ಇಂತಹ ಸಮಸ್ಯೆ ಗಳನ್ನು ಪರಿಹರಿಸುವ ಮಂತ್ರದಂಡವಾದ ಹಣದ ಸಂಪಾದನೆಯ ಕಡೆ ಕಣ್ಣಿಡಬೇಕಾಯಿತು.

ಇದಕ್ಕಾಗಿ ಅದೇ ಊರಿನ "ಜಿಲ್ಲಾ ಪ್ರಧಾನ ಶಾಲೆ" ಯೊಂದ ರಲ್ಲಿ ಉಪಾಧ್ಯಾಯರುಗಳಿಗಾಗಿ ಏರ್ಪಡಿಸಿದ್ದ "ತರಪೇತು ಶಿಕ್ಷಣ"ವನ್ನು ಪಡೆದನು. ಇದರಲ್ಲಿ ಯಶಸ್ವಿಯಾಗಿ ಉತ್ತೀರ್ಣ ನಾದುದರಿಂದ ಬೋಧಕವೃತ್ತಿಯ ಸರ್ಟಿಫಿಕೇಟು ದೊರೆಯಿತು. ತತ್ಪರಿಣಾಮವಾಗಿ ಆ ಊರಿನ ವಿದ್ಯಾರ್ಥಿಗಳ ಮನೆಗಳಿಗೆ ಹೋಗಿ ಪಾಠ ಹೇಳಿಕೊಟ್ಟು ತನ್ನ ಜೀವನೋಪಾಯಕ್ಕೆ ಮತ್ತು ಶಾಲೆಯ ಶುಲ್ಕಕ್ಕಾಗುವಷ್ಟು ಹಣವನ್ನು ಸಂಪಾದಿಸುವುದು

ಸಾಧ್ಯವಾಯಿತು. ಇದರ ಜತೆಗೆ ತನ್ನ ವಿದ್ಯಾರ್ಜನೆ ಬೇರೆ. ವಿಶ್ರಾಂತಿಯ ಸವಿಯನ್ನು ಕನಸಿನಲ್ಲಿಯೂ ಕಾಣದ ಮೆಂಡೆಲ್ ಕಾಯಿಲೆ ಬೀಳಬೇಕಾಯಿತು. ಅಂತೂ ೧೮೪೦ರ ವರೆಗೂ ಛಲದಿಂದ ವ್ಯಾಸಂಗಮಾಡಿ ಅದೇ ವರ್ಷದ ಆಗಸ್ಟ್ ತಿಂಗಳ ಕೊನೆಯಲ್ಲಿ ಏರ್ಪಡಿಸಿದ್ದ ಪ್ರೌಢಶಾಲಾ ಪರೀಕ್ಷೆಯಲ್ಲಿ ಪ್ರಶಸ್ತಿಯೊಡನೆ ತೇರ್ಗಡೆಹೊಂದಿದನು. ಪ್ರೌಢಶಾಲಾ ವ್ಯಾಸಂಗದ ಅಂತ್ಯದವರೆಗೂ ಹಲವಾರು ಎಡರುತೊಡರುಗಳು ಎಡೆಬಿಡದೆ ಬಂದರೂ ತನ್ನ ವ್ಯಾಸಂಗದ ಪ್ರಗತಿಗೆ ಯಾವ ಆತಂಕವೂ ಬರದಂತೆ ನೋಡಿಕೊಂಡಿದ್ದಕ್ಕೆ ಅವನು ಪಡೆದ ಶಾಲೆಯ ರಿಕಾರ್ಡು ಸಾಕ್ಷಿಯಾಗಿ ನಿಂತಿದೆ.

ಪ್ರೌಢ ವಿದ್ಯಾಭ್ಯಾಸವನ್ನು ಮುಗಿಸಿ ಮನೆಗೆ ಹಿಂದಿರುಗಿದ ಮೇಲೆ ಕೆಲವು ದಿನಗಳು ಉರುಳುವ ಮುನ್ನವೇ ತತ್ವಶಾಸ್ತ್ರದ ಅಧ್ಯಯನವನ್ನು ಮಾಡಬೇಕೆಂದು ಯೋಹನನು ನಿರ್ಧರಿಸಿದನು. ಅತೃಪ್ತಿಕರವಾದ ಆರ್ಥಿಕ ಪರಿಸ್ಥಿತಿಯು ಅವನ ವಿದ್ಯಾಭ್ಯಾಸದ ಆಸಕ್ತಿಯನ್ನು ಕುಂದಿಸಿದ್ದರೂ ನಂದಿಸಿರಲಿಲ್ಲ. ಕಡಲೆಯಿದ್ದರೆ ಹಲ್ಲಿಲ್ಲವೆಂಬಂತ್ತಿತು ಅವನ ಪರಿಸರಣ. ಹೇಗಾದರೂ ಮಾಡಿ ಓಲ್‌ಮುಟ್ಸ್ (Olmutz) (ಈಗ ಅದು Olomouc)ನಲ್ಲಿದ್ದ ತತ್ವಶಾಸ್ತ್ರಾಧ್ಯಯನದ ಸಂಸ್ಥೆಗೆ (Philosophical Institute) ಸೇರಿ ವ್ಯಾಸಂಗವನ್ನು ಮುಂದುವರಿಸಲು ದೃಢಸಂಕಲ್ಪಮಾಡಿದನು.

ಮೆಂಡೆಲನು ವಿದ್ಯಾರ್ಜನೆಯ ತದೇಕಚಿತ್ತದಿಂದ ಊರನ್ನು ಬಿಟ್ಟು ಓಲ್‌ಮುಟ್ಸ್‌ನಲ್ಲಿ ತತ್ವಶಾಸ್ತ್ರದ ವಿದ್ಯಾರ್ಥಿಯಾದನು. ಈ ಹೊಸ ಊರಿನಲ್ಲಿ ವಿದ್ಯಾರ್ಥಿಜೀವನ ತಾನು ಎಣಿಸಿದಷ್ಟು ಸರಾಗವಾಗಿರಲಿಲ್ಲ; ಸುಖಕರವಾಗಿರಲಿಲ್ಲ. ಬಲ್ಲಿದರ ಮನೆ

ಗಳಿಗೆ ಹೋಗಿ ಅವರ ಮಕ್ಕಳಿಗೆ ಪಾಠ ಹೇಳಿಕೊಟ್ಟು, ಹಣ ಸಂಪಾದನೆಮಾಡಿ ವ್ಯಾಸಂಗವನ್ನು ಸುಗಮಗೊಳಿಸಲು ಭಗೀರಥ ಪ್ರಯತ್ನಪಟ್ಟನು. ಅವನಿಗೆ ಆ ಊರಿನಲ್ಲಿ ಪರಿಚಿತರು ದೊರೆಯದ ಕಾರಣದಿಂದಲೂ, ಸ್ನೇಹಿತರ ಕೊರತೆಯಿಂದಲೂ ಮತ್ತು ಶಿಫಾರಸ್ಸುಗಳ ಅಭಾವದಿಂದಲೂ ಮೆಂಡೆಲ್‌ನ ಪ್ರಯತ್ನಗಳು ವಿಫಲವಾದುವು. ಇದರಿಂದ ಜೀವನದಲ್ಲಿ ದುಃಖ ಮತ್ತು ಜಿಗುಪ್ಸೆಯುಂಟಾಯಿತು; ತಾನು ಬಯಸಿದ್ದು ಬರಿದಾಯಿತು; ನಿರೀಕ್ಷಿಸಿದ್ದು ನಿರಾಶೆಯಾಯಿತು. ವಿದ್ಯಾರ್ಜನೆಯ ಭವಿಷ್ಯಕ್ಕೆ ನಂಜು ಹಿಡಿದಂತಾಯಿತು. ಯೋಚನೆ, ಆಯಾಸ, ಉಪವಾಸ ಮತ್ತು ಮನಸ್ಸಿನ ಅಶಾಂತಿಗಳಿಂದ ದೇಹಾರೋಗ್ಯ ಕೆಟ್ಟಿತು. ಖಾಯಿಲೆ ಬಿದ್ದು ತೌರೂರಿಗೆ ಹಿಂತಿರುಗಿದನು.

ಮನಸ್ಸಿದ್ದೆಡೆಯಲ್ಲಿ ಮಹದೇವನ ನೆರವು ತಾನಾಗಿಯೇ ಬರುತ್ತದೆಯೆಂದು ಹಿರಿಯರು ಹೇಳುತ್ತಾರೆ. ಆರೋಗ್ಯವನ್ನು ಸುಧಾರಿಸಿಕೊಂಡು ಮತ್ತೆ ಓಲ್‌ಮುಟ್ಸ್‌ಗೆ ಹೊರಟು ನಿಂತಿದ್ದ ಅಣ್ಣನಿಗೆ ಸಹಾಯಕಳಾಗಿ ತಂಗಿ ಥೆರೇಸಿಯಾ ಮುಂದೆ ಬಂದಳು. ತನ್ನ ವರದಕ್ಷಣೆಗಾಗಿ ತನ್ನ ತಂದೆಯು ಕೊಟ್ಟಿದ್ದ ಕುಟುಂಬದ ಸ್ಥಿರ ಆಸ್ತಿಯ ಭಾಗವನ್ನೆಲ್ಲಾ ಉದಾರವಾಗಿ ಅಣ್ಣನಿಗೆ ಕೊಟ್ಟುಬಿಟ್ಟಳು. ಇದರಿಂದ ಮೆಂಡೆಲ್‌ನು ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಲು ತುಂಬಾ ಸಹಾಯಕವಾಯಿತು; ಅನುಕೂಲವಾಯಿತು. ತಂಗಿಯ ಮಹಾತ್ಯಾಗವನ್ನು ತನ್ನ ಜೀವಮಾನದುದ್ದಕ್ಕೂ ನೆನಸಿಕೊಂಡು ಯೋಹನನು ತನ್ನ ಜೀವನದ ಕೊನೆಯಲ್ಲಿ ತಂಗಿಯಮಕ್ಕಳ ವಿದ್ಯಾಭ್ಯಾಸದ ಮತ್ತು ಪೋಷಣೆಯ ಭಾರವನ್ನು ಸಂತೋಷದಿಂದ ಹೊತ್ತು ಋಣ ಮುಕ್ತನಾದನು.

ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿಕೊಂಡು ಹಿಂತಿರುಗಿದ ಮೇಲೆ ತದೇಕಚಿತ್ತದಿಂದ ಎರಡು ವರ್ಷದ ತತ್ವಶಾಸ್ತ್ರದ ವಿದ್ಯಾಭ್ಯಾಸವನ್ನು ಸಾಂಗವಾಗಿ ೧೮೪೩ರಲ್ಲಿ ಮುಗಿಸಿ ಪರೀಕ್ಷೆಯಲ್ಲಿ ಯಶಸ್ವಿಯಾಗಿ ತೇರ್ಗಡೆಹೊಂದಿದನು.

## ೨. ಆಶ್ರಮವಾಸ ಮತ್ತು ಬೋಧಕವೃತ್ತಿ

ಹಣಕಾಸಿನ ಅಭಾವದಿಂದ ಮುಂದಿನ ವಿದ್ಯಾಭ್ಯಾಸಕ್ಕೆ ಸೊನ್ನೆ ಸುತ್ತಬೇಕಾಯಿತು. ದೇಹಾರೋಗ್ಯವೂ ಸುಧಾರಿಸಿರಲಿಲ್ಲ. ಕಷ್ಟ ಕಾರ್ಪಣ್ಯಗಳನ್ನು ಕಡಿಮೆ ಮಾಡಿಕೊಳ್ಳುವ ದಾರಿಯನ್ನು ಹುಡುಕಲಾರಂಭಿಸಿದನು. ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುವ ವೃತ್ತಿಯಲ್ಲಿ ಪ್ರವೇಶಿಸಲು ಆಸಕ್ತನಾದನು. ಹದಗೆಟ್ಟಿದ್ದ ದೇಹಾರೋಗ್ಯಕ್ಕೆ ಯೋಗ್ಯ ಮತ್ತು ಅನುಗುಣವಾದ ಕೆಲಸವನ್ನು ಬಯಸಿದನು.

ಒಂದು ದಿನ ಮೆಂಡೆಲನು ತನ್ನ ಮನೋಭಿಲಾಷೆಯನ್ನು ವ್ಯಕ್ತಪಡಿಸಲು ಓಲ್‌ಮುಟ್ಸ್‌ನಲ್ಲಿ ಪ್ರಾಧ್ಯಾಪಕರಾಗಿದ್ದ ಫ್ರೈಡ್ರಿಹ್ ಫ್ರಾನ್ಸ್ (Freidrich Franz)ರ ಬಳಿಗೆ ಹೋದನು. ಅಲ್ಲಿ ತನ್ನ ಮನೋಗತವನ್ನು ವಿವರಿಸಿ ಅವರ ಸಲಹೆ ಮತ್ತು ಬುದ್ಧಿವಾದವನ್ನು ಕೇಳಿದನು.

ಫ್ರಾನ್ಸ್‌ರವರು ಬ್ರೂಯಿನ್ ಎಂಬ ಊರಿನಲ್ಲಿ ಇಪ್ಪತ್ತು ವರ್ಷಗಳ ಕಾಲ ಉಪಾಧ್ಯಾಯ ವೃತ್ತಿಯಲ್ಲಿದ್ದು ಓಲ್‌ಮುಟ್ಸ್‌ಗೆ ಬಂದಿದ್ದರು. ಮೆಂಡೆಲನು ಭೇಟಿಮಾಡಲು ಬಂದ ಸಮಯಕ್ಕೆ ಸರಿಯಾಗಿ ಬ್ರೂಯಿನ್‌ನಲ್ಲಿದ್ದ ಆಲ್ಟ್‌ಬ್ರೂಯಿನ್ ಕ್ರೈಸ್ತಮಠಾಧಿಕಾರಿಗಳಿಂದ ಒಂದು ಕಾಗದವೂ ಬಂದಿತ್ತು. ಅವರಲ್ಲಿ ಕ್ರೈಸ್ತಮಠದಲ್ಲಿ ಕ್ರೈಸ್ತಸನ್ಯಾಸಿಯಾಗಬಯಸತಕ್ಕ

ಮತ್ತು ಯೋಗ್ಯ ತರುಣರನ್ನು ಆಯ್ದು ಶಿಫಾರಸು ಮಾಡ ಬೇಕೆಂಬ ಪ್ರಾರ್ಥನೆಯಿತ್ತು; ಸದವಕಾಶವನ್ನೂ ಒದಗಿಸಿತ್ತು. ಮೆಂಡೆಲನ ಆರ್ಥಿಕ ಮುಗ್ಗಟ್ಟು ಮತ್ತು ಅನಾರೋಗ್ಯದ ಬಗ್ಗೆ ಪೂರ್ಣವಾಗಿ ಫ್ರಾನ್ಸ್‌ರವರಿಗೆ ಮನದಟ್ಟಾಗಿತ್ತು; ಮತ್ತು ಅವನ ನಡವಳಿಕೆ ಮತ್ತು ಸದ್ಗುಣಗಳಲ್ಲಿ ತುಂಬಾ ಮೆಚ್ಚಿಗೆ ಯಿತ್ತು. ಮೆಂಡೆಲ್‌ನು ಪ್ರೊಫೆಸರ್ ಫ್ರಾನ್ಸ್‌ರವರನ್ನು ಭೇಟಿಮಾಡಿದಾಗ ಕ್ರೈಸ್ತಮಠದಲ್ಲಿ ಕ್ರೈಸ್ತ ಸನ್ಯಾಸಿಯಾಗಿ ಸೇರಿದರೆ ಹಣಕಾಸಿನ ತೊಂದರೆ ನೀಗುವುದೆಂದೂ, ಅಲ್ಲದೆ ಅನಾರೋಗ್ಯದಿಂದ ಕೃಶವಾಗಿದ್ದ ದೇಹಕ್ಕೆ ಅತ್ಯಗತ್ಯವಾಗಿ ಬೇಕಾದ ವಿಶ್ರಾಂತಿಯು ದೊರಕುವುದೆಂದೂ ಬುದ್ಧಿವಾದವನ್ನು ಹೇಳಿದರು. ಸರ್ವತೋಮುಖ ದೃಷ್ಟಿಯಲ್ಲಿ ಅನುಕೂಲ ಸಿದ್ಧಿಸುವುದೆಂದು ಹಿತವಚನ ನುಡಿದರು.

ಪ್ರೊ|| ಫ್ರಾನ್ಸ್‌ರವರ ಸಲಹೆ ಸೂಕ್ತವೆಂದು ಮೆಂಡೆಲನಿಗೂ ಕಂಡುಬಂತು. ಮೆಂಡೆಲನು ತನ್ನ ಒಪ್ಪಿಗೆಯನ್ನು ವ್ಯಕ್ತಪಡಿ ಸಿದ ಕೂಡಲೇ ಪ್ರೊ|| ಫ್ರಾನ್ಸ್‌ರು ಕ್ರೈಸ್ತಮಠದ ಮುಖ್ಯಾಧಿ ಕಾರಿಗಳಿಗೆ ಒಂದು ಕಾಗದವನ್ನು ಬರೆದರು. ಮೆಂಡೆಲನ ಬಗ್ಗೆ ತಮಗೆ ಮನವರಿಕೆಯಾದ ಅಭಿಪ್ರಾಯವನ್ನು ಸ್ಪಷ್ಟಪಡಿಸಿದರು. ತಮ್ಮ ಒಕ್ಕಣೆಯಲ್ಲಿ " ಮೆಂಡೆಲನು ಅತ್ಯಂತ ಅಸಾಧಾರಣ ವಾದ ಪಾಂಡಿತ್ಯವನ್ನು ಪಡೆದಿದ್ದಾನೆ. ನಿಜಕ್ಕೂ ಸತ್‌ಸ್ವಭಾ ವದ ಮತ್ತು ದೃಢತೆಯ ನಡೆನುಡಿಗಳನ್ನುಳ್ಳವನು ಈ ಯುವಕ" ಎಂಬ ಸತ್ಯಸಂಗತಿಯನ್ನು ಸೇರಿಸಿದ್ದರು.

ಮೆಂಡೆಲನು ಪ್ರೊ|| ಫ್ರಾನ್ಸ್‌ರವರ ಪ್ರೇರೇಪಣೆ, ಪ್ರೋತ್ಸಾಹ ಮತ್ತು ನೆರವಿನಿಂದಾಗಿ ಸನ್‌ಸಾವಿರದ ಎಂಟುನೂರನಲವತ್ತ ಮೂರನೇ ಇಸವಿ ಅಕ್ಟೋಬರ್ ಒಂಬತ್ತನೇ ತಾರೀಖು ಅಂದರೆ

ತನ್ನ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಬ್ರೂಯಿನ್ (Brünn) ಎಂಬ ಊರಿನಲ್ಲಿದ್ದ ಅಗಸ್ಟೀನಿಯನ್ ವರ್ಗಕ್ಕೆ ಸೇರಿದ ಸೇಯಿಂಟ್ ಥಾಮಸ್‌ರ ಕ್ರೈಸ್ತಮಠವನ್ನು ಪ್ರವೇಶಿಸಿದನು. ಸನ್ಯಾಸಿ ದೀಕ್ಷೆಯನ್ನು ವಹಿಸುವುದಕ್ಕೆ ಮುಂಚೆ ಸಂಪ್ರದಾಯದ ಪ್ರಕಾರ ಪ್ರತಿಜ್ಞೆಮಾಡಿ ಅಗಸ್ಟೀನಿಯನ್ ಸನ್ಯಾಸಿಗಳ ಭ್ರಾತೃವರ್ಗದ ಹೊಸ ಶಿಷ್ಯನಾದನು.

ಕ್ರೈಸ್ತಮಠದಲ್ಲಿ ಆರೇಳು ವರ್ಷಗಳ ಕಾಲ ಸನ್ಯಾಸ ಜೀವನವನ್ನು ಸಾಗಿಸಿದ ಮೇಲೆ ಒಂದು ಸಂದರ್ಭದಲ್ಲಿ ತನ್ನ ಆತ್ಮಕಥೆಯನ್ನು ಬರೆದುಕೊಳ್ಳುವ ಪ್ರಸಂಗ ಒದಗಿತು. ತನ್ನ ೨೮ ವರ್ಷದ ಆತ್ಮಕಥೆಯನ್ನು ಬೇರೊಬ್ಬರು ಬರೆದಂತೆ ನಾಲ್ಕು ಪುಟಗಳಷ್ಟು ಬರೆದುಕೊಂಡಿದ್ದಾನೆ. ಅದರಲ್ಲಿ ಒಂದೆಡೆ ಹೀಗಿದೆ: "ಅಂಥ ಶ್ರಮಪಡಿಸುವ ಪಾಡುಪಟ್ಟುಗಳನ್ನು ಮುಂದುವರಿಸುವುದು ಅಸಾಧ್ಯವೆಂದು ಅವನಿಗೆ ತೋರಿಬಂತು. ಅವನ ಜೀವನೋಪಾಯದ ಬಗ್ಗೆ ಸತತವಾಗಿ ಪೀಡಿಸುತ್ತಿದ್ದ ಕಾತರದಿಂದ ಅವನನ್ನು ಪಾರುಮಾಡುವ ಯಾವುದಾದರೊಂದು ಉದ್ಯಮಕ್ಕೆ ಕೈಹಾಕುವುದು ಅವನಿಗೆ ಅನಿವಾರ್ಯವೆಂದೆನಿಸಿತು. ಅವನ ವ್ಯಕ್ತಿಸಂಬಂಧ ಪರಿಸ್ಥಿತಿಗಳು ಮನಸ್ಸಿಗೆ ತೋಚಿದ ವೃತ್ತಿಯನ್ನು ಆರಿಸಿಕೊಳ್ಳಲು ನಿರ್ಧರಿಸಿದವು."

ಮೆಂಡೆಲನು ತನ್ನ ಆತ್ಮಕಥೆಯಲ್ಲಿ ಬರೆದುಕೊಂಡ ಹೇಳಿಕೆಯನ್ನು ಕೆಲವರು ಬೇರೆಯ ದೃಷ್ಟಿಯಲ್ಲಿ ಅಳೆದು, ಮೆಂಡೆಲನ ಮತೀಯ ಧರ್ಮದ ಮೇಲಣ ವಿಶ್ವಾಸದ ಬಗ್ಗೆ ಶಂಕಿಸಿದ್ದಾರೆ. ಆದರೂ ಮಠದ ಧಾರ್ಮಿಕ ಜೀವನದಲ್ಲಿ ಆದರ್ಶ ಜೀವನವನ್ನು ಅವನು ಸಾಗಿಸಿದ್ದಕ್ಕೆ ಹಲವಾರು ಉದಾಹರಣೆಗಳಿವೆ. ಮಠಾಧಿಕಾರಿಯಾದ ಮೇಲೆ ಶ್ರದ್ಧೆಯಿಂದ ಜನರ ಆಧ್ಯಾತ್ಮಿಕ ಜೀವನಕ್ಕಾಗಿ ದುಡಿದಿರುವ ದೃಷ್ಟಾಂತಗಳಿವೆ.

ಯೋಹನ್ ಮೆಂಡೆಲನು ಇನ್ನೂ ಚಿಕ್ಕವನಾಗಿದ್ದಾಗಲೇ ಅವನ ತಂದೆತಾಯಿಗಳು ಮಗನನ್ನು ಆಧ್ಯಾತ್ಮಿಕ ಜೀವನದ ದಾರಿಯಲ್ಲಿ ನಡೆಸುವ ಸಾಧ್ಯತೆಗಳನ್ನು ಚರ್ಚಿಸಿದ್ದರು. ಮಗನ ಜೀವನಪ್ರವೃತ್ತಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ಜೀವನ ದೊಂದಿಗೆ ಐಕ್ಯವಾಗುವುದನ್ನು ಮನಗಂಡಿದ್ದರು. ಅದ ಕ್ಕಾಗಿಯೇ ಆಂಟೋನ್ ಮೆಂಡೆಲನು "ಒಂದು ವೇಳೆ ಹಾನ್ಜೆಲನು ಕ್ರೈಸ್ತ ಸನ್ಯಾಸಿಯಾಗಬಯಸುವುದಾದರೆ" ಅದಕ್ಕೆ ಆವಶ್ಯಕವಾದ ವಿದ್ಯಾಭ್ಯಾಸದ ಖರ್ಚಿನ ಸಲುವಾಗಿ ತನ್ನ ಉಯಿಲಿನಲ್ಲಿ ಸ್ವಲ್ಪ ಹಣವನ್ನು ಮೀಸಲಾಗಿ ಮೆಂಡಲನಿಗೆಂದು ಇರಿಸಿದ್ದನು. ಆದರೆ ಯೋಹನ್‌ನನು ತನ್ನ ಮುಂದಿನ ಜೀವನವನ್ನು ರೂಪಿಸಿಕೊಳ್ಳುವುದು ಸ್ವಲ್ಪ ತಡವಾಯಿತಷ್ಟೆ! ಅಂದಮೇಲೆ ಧಾರ್ಮಿಕ ಮತ್ತು ಆಧ್ಯಾತ್ಮಿಕ ಜೀವನದಲ್ಲಿ ಆಸಕ್ತಿ ಮೊದಲಿನಿಂದಲೂ ಮೆಂಡೆಲನಿಗೆ ಇತ್ತು. ಒಂದು ವೇಳೆ ಅವನ ಕುಟುಂಬವು ಆರ್ಥಿಕ ದೃಷ್ಟಿಯಲ್ಲಿ ತೃಪ್ತಿಕರ ವಾಗಿರದಿದ್ದಲ್ಲಿ ಕ್ರೈಸ್ತ ಸನ್ಯಾಸಿಯಾಗುವುದಕ್ಕೆ ಬದಲಾಗಿ ಪ್ಯಾರಿಷ್ ಪಾದ್ರಿಯಾಗಬಹುದಾಗಿತ್ತು.

ಕ್ರೈಸ್ತಮಠವನ್ನು ಪ್ರವೇಶಿಸಿದ ಮೇಲೆ ಯೋಹನ್ ಮೆಂಡೆಲನ ಐಹಿಕ ಸುಖಸಂಪತ್ತು ಸಂಪೂರ್ಣವಾಗಿ ರೂಪುಗೊಂಡವು. ಆಗ ಅವನಿಗೆ ಮೂಲಭೂತವಾದ ಜೀವನದ ಮತ್ತು ಅಸ್ತಿತ್ವದ ಬಗ್ಗೆ ಇದ್ದ ಕಾತರತೆಯು ಕರಗಿಹೋಯಿತು. ಬದುಕಿನಲ್ಲಿ ಮತ್ತು ಅಧ್ಯಯನದಲ್ಲಿ ಹೊಸ ಉತ್ಸಾಹ, ಸ್ಫೂರ್ತಿ, ಆಸಕ್ತಿ, ಅಂತಃಶಕ್ತಿ ಎಲ್ಲವೂ ಒಮ್ಮೆಯೇ ಹೊರಹೊಮ್ಮಿದುವು.

ನಾಲ್ಕು ವರ್ಷಗಳ ಧಾರ್ಮಿಕ ಜೀವನವು ಕ್ರೈಸ್ತಮಠದಲ್ಲಿ ಸಾಗಿದ ಮೇಲೆ, ಮತಶ್ರದ್ಧೆ ಮತ್ತು ಧರ್ಮಶ್ರದ್ಧೆಯಿಂದ ಕರ್ತವ್ಯ

ನಿಷ್ಠನಾಗಿ ಸನ್ಯಾಸ ವ್ರತವನ್ನು ಕೈಗೊಂಡ ಮೆಂಡೆಲನಿಗೆ ಬಿಷಪ್‌ರ ಒಪ್ಪಿಗೆ ಮತ್ತು ಆಶೀರ್ವಾದದಿಂದ ಉಪಡೇಕನ್ ಪದವಿಯನ್ನು ಕೊಡಲಾಯಿತು. ಅಂದು ಅವನ ಇಪ್ಪತ್ತೈದನೆಯ ಜನ್ಮದಿನೋತ್ಸವ. ಇದಾದ ಎರಡು ದಿನಗಳ ಮೇಲೆ ೧೮೪೭ರಲ್ಲಿ ರೋಮನ್ ಕ್ಯಾಥೊಲಿಕ್ ಮತದ ಪದ್ಧತಿಯ ಪ್ರಕಾರ ವಿಧಿಪೂರ್ವಕವಾಗಿ ಕ್ರೈಸ್ತ ಸನ್ಯಾಸ ದೀಕ್ಷೆಯನ್ನು ಪಡೆದನು; ಮತ್ತು ಅವನಿಗೆ ಸಂಪ್ರದಾಯದ ಪ್ರಕಾರ ಗ್ರೆಗೋರ್ (Gregor) ಎಂಬ ಪುನರ್ ನಾಮಕರಣವೂ ಆಯಿತು. ಈ ಹೊಸ ನಾಮಾಂಕಿತವನ್ನು ತನ್ನ ಹೆಸರಿನ ಹಿಂದೆ ಇಟ್ಟು ಕೊಂಡನು. ಅಲ್ಲಿಂದ ಮುಂದೆ ಮುಖ್ಯವಾಗಿ ವಿಜ್ಞಾನ ಪ್ರಪಂಚದಲ್ಲಿ ವಿಶ್ವದಾದ್ಯಂತ "ಯೋಹನ್ ಮೆಂಡೆಲ್" ಎಂಬ ಹೆಸರಿಗಿಂತ "ಗ್ರೆಗೋರ್ ಮೆಂಡೆಲ್" ಎಂಬ ನಾಮಧೇಯವೇ ಸಾಮಾನ್ಯವಾಗಿ ಬಳಕೆಗೆ ಬಂತು.

ಆಲ್ಟ್‌ಬ್ರೂಯಿನ್ನಿನ ಕ್ರೈಸ್ತಮಠ ಒಂದು ಸುಂದರವಾದ ಭವ್ಯಮಂದಿರ; ಸಿರಿತನದ ತೌರೂರು; ಸಂಸ್ಕೃತಿಯ ಪ್ರತೀಕ. ಆ ಮಠಕ್ಕೆ ಸಂಬಂಧಿಸಿದ ಭ್ರಾತೃವರ್ಗದವರು ತತ್ವಶಾಸ್ತ್ರ, ಕ್ರೈಸ್ತಮತ ಧರ್ಮಶಾಸ್ತ್ರ, ವಿಜ್ಞಾನ, ಸಾಹಿತ್ಯ, ಮತ್ತು ಕಲೆ ಮೊದಲಾದವುಗಳಲ್ಲಿ ತೀವ್ರಾಸಕ್ತಿಯುಳ್ಳವರಾಗಿದ್ದರು. ಸಾಮಾನ್ಯವಾಗಿ ಪ್ರತಿ ಸಂಜೆ ಧರ್ಮಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ವಿಜ್ಞಾನಗಳೆಲ್ಲವನ್ನೂ ಚರ್ಚಿಸುತ್ತಿದ್ದರು. ಒಟ್ಟಿನಲ್ಲಿಹೇಳುವುದಾದರೆ ಈ ಕ್ರೈಸ್ತಮಠ ಜ್ಞಾನಪ್ರಕಾಶದ ಮತ್ತು ಜ್ಞಾನಾರ್ಜನೆಯ ಕೇಂದ್ರ; ಸುತ್ತಮುತ್ತಲಿನ ಜನ ಸಾಮಾನ್ಯರಿಗೆ ಜ್ಞಾನ ದೀವಿಗೆ. ಇದರ ಪ್ರಭಾವ ಮತ್ತು ಪ್ರಾಮುಖ್ಯತೆಗಳನ್ನು ನಮ್ಮ ಆಧುನಿಕ ವಿಶ್ವವಿದ್ಯಾನಿಲಯಗಳಿಗೆ ಹೋಲಿಸಿದರೆ ತಪ್ಪಾಗಲಾರದು.

ಯೂರೋಪಿನಲ್ಲಿ ಕಳೆದ ಶತಮಾನದ ಪೂರ್ವಾರ್ಧಭಾಗ ನಿಜಕ್ಕೂ ವಿಪ್ಲವದ ಕಾಲ. ಜನರಲ್ಲಿ ಜಾಗ್ರತಿ ಮೂಡಿತ್ತು. ಸನ್ಯಾಸ ಮಠಗಳಲ್ಲಿಯೂ ಕೂಡ ನವಚೈತನ್ಯ, ಹೊಸಭಾವನೆ ಉದಯವಾದಂತಿತ್ತು. ಒಮ್ಮೊಮ್ಮೆ ರಾಜಕೀಯಕ್ಕೆ ಸಂಬಂಧಿಸಿದ ವಿಷಯಗಳನ್ನು ಕ್ರೈಸ್ತ ಪಾದ್ರಿ ಭ್ರಾತೃಗಳು ಚರ್ಚಿಸದೆ ಇರುತ್ತಿರಲಿಲ್ಲ. ಮಠದ ಸನ್ಯಾಸಿ ಸೋದರರು ಮಠವನ್ನು ಬಿಟ್ಟು, ಸನ್ಯಾಸ ವ್ರತವನ್ನು ತ್ಯಜಿಸಿ, ಜನ ಸಾಮಾನ್ಯರ ಮತ್ತು ದಲಿತರ ಉದ್ಧಾರಕ್ಕಾಗಿ ರಾಜಕೀಯ ರಂಗಕ್ಕೆ ಧುಮುಕಿಯೂ ಇದ್ದರು. ಇಂತಹ ವಿಪ್ಲವ ಪ್ರವಾಹ ದಲ್ಲಿ ಮೆಂಡಲನು ಬೀಳದಿರಲಿಲ್ಲ. ಆದರೆ ತಾನು ಕೇವಲ ವಿದ್ಯಾರ್ಥಿ ಜೀವನವನ್ನು ಸಾಗಿಸುತ್ತಿದ್ದೇನೆಂಬ ಭಾವನೆ ದೃಢವಾಗಿದ್ದುದರಿಂದ ಮಠದಲ್ಲಿಯೇ ನಿಲ್ಲಬೇಕಾಯಿತು.

ಮೆಂಡೆಲನು ಮಠದ ಮೊದಲ ವರ್ಷದ ಜೀವನ ಕಾಲದಲ್ಲಿ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳನ್ನು ಅಧ್ಯಯನ ಮಾಡಿದನು. ಅದಾದಮೇಲೆ ಕ್ರೈಸ್ತಮತ ಧರ್ಮಶಾಸ್ತ್ರದ ನಾಲ್ಕು ವರ್ಷದ ವ್ಯಾಸಂಗವನ್ನು ಪ್ರಾರಂಭಿಸಿದನು. ಮೊದ ಮೊದಲು ಅವನಿಗೆ ಕ್ರೈಸ್ತ ಸನ್ಯಾಸ ಜೀವನ ಹಿತಕರವೆನಿಸಲಿಲ್ಲ; ಕಷ್ಟಮಯವಾಗಿಯೇ ಕಂಡಿತು. ಭಜನೆಗಳು ಒಮ್ಮೊಮ್ಮೆ ಬೇಸರವಾದುವು. ಮಠದ ಜಡವಾದ ಜೀವನ ಅತೃಪ್ತಿಯ ನ್ನುಂಟುಮಾಡಿತು. ಇದರಿಂದ ಆಗಾಗ್ಗೆ ನಿರಾಶನಾಗುತ್ತಿದ್ದನು. ಕಾಯಕವೇ ಕೈಲಾಸವೆಂಬುದು ಅವನ ಪ್ರವೃತ್ತಿ. ಅವನು ನಿಜಕ್ಕೂ ಕರ್ಮಯೋಗಿ. ಜೀವನದಲ್ಲಿ ಬೇಸರವೆನಿಸಿದಾಗ ಮಠದ ಸುತ್ತಮುತ್ತಲಿನ ತೋಟಕ್ಕೆ ಹೋಗಿ ಮರಗಿಡ ಗಳನ್ನು ನೋಡಿ ಸಂತೃಪ್ತನಾಗುತ್ತಿದ್ದನು. ಯಾವುದೋ

ಒಂದು ಅಮಾನುಷ ಶಕ್ತಿ ಪ್ರಕೃತಿಯೊಂದಿಗೆ ಆಟವಾಡಲು ಕರೆಯುವಂತಿತ್ತು. ಆದಕಾರಣ ಸನ್ಯಾಸವೃತ್ತಿಯ ದಿನಚರಿಯನ್ನು ಬಿಟ್ಟರೆ ಸುಖವಾಗಿರಬಹುದೆಂದು ಆಶಿಸುತ್ತಿದ್ದನು. ಇಷ್ಟಾದರೂ ಧಾರ್ಮಿಕ ಮತ್ತು ಧರ್ಮಶಾಸ್ತ್ರದ ಅಧ್ಯಯನದಲ್ಲಿ ಆಸಕ್ತಿ ಕುಂದಿರಲಿಲ್ಲ.

ಮೆಂಡೆಲನು ಅತ್ಯಂತ ಮೃದು ಹೃದಯಿ. ದೀನ ದಲಿತರನ್ನು ಮತ್ತು ರೋಗಿಗಳನ್ನು ನೋಡಿದರೆ ಸಾಕು ಜೀವನದಲ್ಲಿ ಅತೃಪ್ತಿ, ಅಶಾಂತಿ ಮೂಡುತ್ತಿದ್ದುವು. ಒಮ್ಮೆ ಕಾಯಿಲೆಯಿಂದ ನರಳುತ್ತಿದ್ದ ಪಾದ್ರಿಯೊಬ್ಬರ ಸೇವೆ ಶುಶ್ರೂಷೆಗಳಿಗೆ ಮೆಂಡೆಲನನ್ನೇ ಕಳುಹಿಸಬೇಕಾಗಿತ್ತು. ಕಾಯಿಲೆ ಬಿದ್ದವರನ್ನು ನೋಡಿದೊಡನೆಯೇ ಸುಲಭವಾಗಿ ಮನೋವಿಕಾರ ಹೊಂದುವ ಮೆಂಡೆಲನು ಹೇಗೆ ತನ್ನ ಕೈಂಕರ್ಯವನ್ನು ಕೈಗೊಂಡಾನು? ಒಂದೆರಡು ದಿನಗಳಲ್ಲಿಯೇ ಕಾಯಿಲೆಯಿಂದ ನರಳುತ್ತಿದ್ದ ಪಾದ್ರಿಗಳನ್ನು ನೋಡಿ ತನ್ನ ಹೃದಯವೂ ಭಾರವಾಗಿ ತಾನೂ ಕಾಯಿಲೆ ಬಿದ್ದನು. ಈ ಪ್ರಸಂಗವನ್ನು ಕಣ್ಣಾರೆ ಕಂಡ ಮಠದ ಮುಖ್ಯಾಧಿಕಾರಿಗಳು ಅವನನ್ನು ಮಠಕ್ಕೆ ಕರೆಸಿಕೊಳ್ಳಬೇಕಾಯಿತು. ಮೆಂಡೆಲನ ಬದಲಿಗೆ ಬೇರೆಯವರನ್ನು ನೇಮಿಸಬೇಕಾಯಿತು.

ಆಲ್ಟ್‌ಬ್ರೂಯಿನ್ ಕ್ರೈಸ್ತಮಠವನ್ನು ಸುತ್ತುವರಿದಂತೆ ಒಂದು ಭವ್ಯವಾದ ಮತ್ತು ಸುಂದರವಾದ ವಾತಾವರಣ. ಇದಕ್ಕೆ ಶೋಭಾಯಮಾನವಾಗಿರುವ ಒಂದು ಸಸ್ಯೋಪವನವು (Botanical garden) ಮೆಂಡೆಲನು ಮಠಕ್ಕೆ ಬರುವುದಕ್ಕೆ ಮುಂಚೆಯೇ ರೂಪುಗೊಂಡಿತ್ತು. ಈ ತೋಟವನ್ನು ಶಾಸ್ತ್ರೀಯವಾಗಿ ಮತ್ತು ಸುವ್ಯವಸ್ಥಿತ ರೀತಿಯಲ್ಲಿ ಮಠಕ್ಕೆ

ಸೇರಿದ ಒಂದು ಭಾಗದಲ್ಲಿ ರೂಪಿಸಿದ್ದವರು ಆ ಮಠಕ್ಕೆ ಸೇರಿದ್ದ ಸನ್ಯಾಸಿ ಸೋದರರಾದ ಓರೇಲಿಯಸ್ ಥಾಲೆರ್ ಪಾದ್ರಿಯವರು (Father Aurelius Thaler). ಇವರು ಮೆಂಡೆಲನು ಮಠಕ್ಕೆ ಬರುವುದಕ್ಕೆ ಕೆಲವು ತಿಂಗಳ ಹಿಂದೆಯೇ ದಿವಂಗತರಾಗಿದ್ದರು. ಥಾಲೆರ್‌ರವರು ಧಾರ್ಮಿಕ ತತ್ವಗಳಲ್ಲಿ ಪರಿಣತರು. ಸಸ್ಯ ಶಾಸ್ತ್ರದ ತಜ್ಞರು. ಇವರು ದಿನವೆಲ್ಲಾ ಆ ಸಸ್ಯಗಳ ಉದ್ಯಾನ ದಲ್ಲಿ ಕಷ್ಟಪಟ್ಟು ಕೆಲಸಮಾಡಿ, ಸಂಜೆಯಲ್ಲಿ ದಿನದ ದೇಹಶ್ರಮ ವನ್ನು ಮರೆಯಲು ಮತ್ತು ಸಂತೋಷಕ್ಕಾಗಿ ಮದ್ಯದಂಗಡಿಗೆ ಹೋಗುತ್ತಿದ್ದರು. ಆದರೆ ಆ ಮಠದ ಮುಖ್ಯಾಧಿಕಾರಿಗಳಾದ ಸಿರಿಲ್ ನಾಪ್ ಪಾದ್ರಿ ( Father Cyril Napp )ಯವರಿಗೆ ಆಲ್ಕೋಹಾಲಿನಿಂದ ಕೂಡಿದ ದ್ರಾಕ್ಷಾರಸ ಸೇವನೆಯಲ್ಲಿ ಮಗ್ನ ರಾಗುತ್ತಿದ್ದ ಥಾಲೆರ್ ಪಾದ್ರಿಯವರ ವರ್ತನೆ ಸರಿಬೀಳುತ್ತಿರ ಲಿಲ್ಲ. ಇದಕ್ಕೆ ಅತೃಪ್ತರಾಗಿ ಅವರಿಗೆ ಪಾಠ ಕಲಿಸ ಬೇಕೆಂದು ನಾಪ್ ಪಾದ್ರಿಯವರು ತೀರ್ಮಾನಮಾಡಿದರು. ಅದರಂತೆ ಒಂದು ದಿನ ರಾತ್ರಿ ತಮ್ಮ ಅಧಿಕಾರದ ನಿಯಮಿತ ಉಡುಪನ್ನು ಧರಿಸಿ ತಮ್ಮ ಪಾದ್ರಿ ಭ್ರಾತೃವಿನ ಆಗಮನವನ್ನೇ ನಿರೀಕ್ಷಿಸುತ್ತಾ ಬಾಗಿಲಬಳಿಯಲ್ಲಿಯೇ ಕುಳಿತರು. ದ್ರಾಕ್ಷಾರಸ ಸೇವನೆಮಾಡಿದ್ದ ಥಾಲೆರ್ ಪಾದ್ರಿಯವರು ರಾತ್ರಿ ಮಠಕ್ಕೆ ಹಿಂತಿರುಗಿ ದಿನಂಪ್ರತಿಯಂತೆ ಬಾಗಿಲು ತಟ್ಟಿದರು. ಬಾಗಿಲು ತೆರೆದೊಡನೆಯೇ ಬಾಗಿಲ ಬಳಿ ನಿಂತಿದ್ದ ಅಧಿಕಾರದ ಸಮವಸ್ತ್ರ ಧಾರಿಗಳಾದ ಮಠದ ಮುಖ್ಯಾಧಿಕಾರಿಗಳನ್ನು ನೋಡಿ ಬೆಕ್ಕಸ ಬೆರಗಾದರು. ಅನಂತರ ಎರಡು ಹೆಜ್ಜೆ ಹಿಂದೆ ಸರಿದು ನಮ್ರತೆ ಯಿಂದ ಮತ್ತು ವಿನಯಪೂರ್ವಕವಾಗಿ ತಲೆಬಾಗಿ ನಮಸ್ಕರಿಸಿ "ಸ್ವಾಮಿ, ತಮ್ಮ ಪವಿತ್ರವಾದ ಮಠವನ್ನು ಪ್ರವೇಶಿಸುವಷ್ಟು

ನಾನು ಅರ್ಹನಲ್ಲ ಕ್ಷಮಿಸಿ" ಎಂದು ಹೇಳಿ ಮದ್ಯದಂಗಡಿಗೆ ಹಿಂತಿರುಗಿದರು.

ಮೆಂಡೆಲನಿಗೆ ತನ್ನ ಮೊದಲ ನಾಲ್ಕೈದು ವರ್ಷದ ಮಠದ ಜೀವನದಲ್ಲಿ ವಿರಾಮ ದೊರೆತಾಗಲೆಲ್ಲಾ ಸಸ್ಯೋಪವನಕ್ಕೆ ಹೋಗಿ ಗಿಡಮರಗಳನ್ನು ಪರೀಕ್ಷಿಸುವುದು, ಖನಿಜಗಳನ್ನು ಸಂಗ್ರಹಿಸುವುದು, ಜೇನು ಸಾಕುವುದು, ತೋಟಗಾರಿಕೆಯಲ್ಲಿ ತೊಡಗುವುದು—ಇವೇ ಅವನ ಜೀವನದ ಹವ್ಯಾಸವಾಗಿದ್ದುವು. ಧಾರ್ಮಿಕ ತತ್ವಶಾಸ್ತ್ರವನ್ನು ಭಕ್ತಿ, ನಿಷ್ಠೆ ಮತ್ತು ಆಸಕ್ತಿಯಿಂದ ಅಧ್ಯಯನಮಾಡುತ್ತಿದ್ದರೂ ಅದಕ್ಕಿಂತ ಮಿಗಿಲಾಗಿ ಪ್ರಕೃತಿಯ ವೈಚಿತ್ರ್ಯದಲ್ಲಿ ಅವನಿಗೆ ವ್ಯಾಮೋಹ. ಪ್ರಕೃತಿಯ ಲೀಲೆಗಳಲ್ಲಿ ಅತ್ಯಾಶ್ಚರ್ಯ. ನೈಸರ್ಗಿಕ ಲೀಲೆಯನ್ನು ಕುತೂಹಲದಿಂದ ಬಿಚ್ಚುಕಣ್ಣಿನಿಂದ ನೋಡಿ ಬೆರಗಾಗುತ್ತಿದ್ದನು.

ಮೆಂಡೆಲನು ಮಠಕ್ಕೆ ಸೇರಿದಂದಿನಿಂದ ತನ್ನ ಉಳಿದ ಆಯುರ್ಮಾನವನ್ನೆಲ್ಲಾ ಅಂದರೆ ಸುಮಾರು ನಲವತ್ತೊಂದು ವರ್ಷಕಾಲ ಈ ಮಠದಲ್ಲಿಯೇ ಕಳೆದನು. ಈ ಮಠವು ತನ್ನ ಬಾಲ್ಯದಲ್ಲಿ ಅಂಕುರಿಸಿದ ಆನುವಂಶೀಯತೆಯ ಮರ್ಮದ ಅರಿವಿನ ಪ್ರಬಲಾಸಕ್ತಿಗೆ ಅನುಗುಣವಾದ ಸೂಕ್ತ ವಾತಾವರಣ ಒದಗಿಸಿತು. ತನ್ನ ಪಾಂಡಿತ್ಯಪೂರ್ಣವಾದ ತಳಿಮಿಶ್ರಣ ಪ್ರಯೋಗ ಪರೀಕ್ಷೆ (Hybridization experiments) ಗಳಿಗೆ, ಪ್ರೇರಣೆ, ಪ್ರೋತ್ಸಾಹ, ಸತ್ಸಂಗ ಮೇಲಾಗಿ ವಿರಾಮಕಾಲ ಮೊದಲಾದ ಸಕಲ ಸೌಲಭ್ಯಗಳೂ ಮೆಂಡೆಲನಿಗೆ ಕಾದಿದ್ದು ವೆಂದರೆ ತಪ್ಪಾಗಲಾರದು.

ಈ ಮಠದ ಬದಿಯಲ್ಲಿದ್ದ ತೋಟದಲ್ಲಿಯೇ ಮೆಂಡೆಲನು ತನ್ನ ಆನುವಂಶೀಯತೆಗೆ ಸಂಬಂಧಿಸಿದ ಉಜ್ವಲ ಪ್ರಯೋಗ

ಗಳನ್ನು ಬಟಾಣಿ ಗಿಡದ ಮೇಲೆ ನಡೆಸಿದ್ದು; ವೈಜ್ಞಾನಿಕ ಮಹಾ ಸಂಶೋಧಕನಾಗಿ ಪರಿವರ್ತನೆಗೊಂಡದ್ದು; ಆನು ವಂಶೀಯತೆಯ ಮರ್ಮಧರ್ಮಗಳನ್ನರಿತು ನಿಯಮಸೂತ್ರ ಗಳನ್ನು ನೆಯ್ದದ್ದು; ಜೀವವಿಜ್ಞಾನದ ಮಹಾಶಾಖೆಯಾದ ಆಧುನಿಕ ತಳಿವಿಜ್ಞಾನಕ್ಕೆ ಸುಭದ್ರವಾದ ಅಸ್ತಿಭಾರವನ್ನು ಹಾಕಿದ್ದು. ಮೆಂಡೆಲನು ಇದೇ ಮಠದಲ್ಲಿ, ಸನ್ಯಾಸ ಜೀವನವನ್ನು ಸಾಗಿಸುತ್ತಿದ್ದಾಗಲೇ, ತಾನು ಎಸಗಿದ ಪ್ರಯೋಗ ಪರೀಕ್ಷೆಗಳನ್ನು ಊರಿನ ವಿಜ್ಞಾನಿಗಳಿಗೆ ವಿವರಿಸಿದನು. ವಿಶ್ವದ ವಿಜ್ಞಾನಿಗಳಿಗೆ ಅರಿವಾಗಲೆಂದು ತನ್ನ ಪ್ರಯೋಗ ಪರೀಕ್ಷೆ ಗಳನ್ನು ಆನುವಂಶೀಯತೆಯ ತತ್ವಗಳನ್ನು ಪ್ರಕಟಿಸಿದನು. ಆದರೆ ತನ್ನ ಜೀವಿತದಲ್ಲಿಯೇ ತನ್ನ ಪರಿಶೋಧನೆಗಳು ಅನಾಕರ್ಷಣೀಯವಾದುದನ್ನೂ ಕಂಡನು; ಅವು ತರ್ಕಾ ತರ್ಕಗಳಿಗೆ ಸಿಕ್ಕದೆ ಅನಾದರಣೀಯವಾಗಿ ನಿರ್ಲಕ್ಷ್ಯ ಸಮಾಧಿ ಯಲ್ಲಿ ಮರೆಯಾದುದನ್ನು ಕಂಡನು; ಕೊನೆಗೆ ಕಣ್ಮುಚ್ಚಿದನು.

ಮೆಂಡೆಲನಿಗೆ ಕಾಲೇಜುಗಳಲ್ಲಿ ಸಮರ್ಪಕವಾದ ಮತ್ತು ಸುವ್ಯವಸ್ಥಿತವಾದ ವೈಜ್ಞಾನಿಕ ಶಿಕ್ಷಣ, ಬೋಧನೆ ಮತ್ತು ತರಪೇತು ದೊರೆಕಿರಲಿಲ್ಲ. ಹಣ್ಣು, ಹೂವು ತರಕಾರಿ ಮೊದ ಲಾದ ಸಸ್ಯಗಳನ್ನು ಬೆಳೆಯುವ ಸಾಮಾನ್ಯ ತೋಟಗಾರನಿಗೆಷ್ಟು ತೋಟಗಾರಿಕೆಯಲ್ಲಿ ಅಭಿರುಚಿಗಳಿರುತ್ತವೆಯೋ ಅಷ್ಟೇ ಅವನಿ ಗಿದ್ದ ಆಸಕ್ತಿ. ಮಠದಲ್ಲಿದ್ದ ಭ್ರಾತೃವರ್ಗದ ಅನೇಕ ಸಹಪಾಠಿ ಗಳು ಇವನಿಗಿಂತಲೂ ಹೆಚ್ಚು ಸಸ್ಯಶಾಸ್ತ್ರವನ್ನು ಅಧ್ಯಯನ ಮಾಡಿದ್ದರು; ಶಾಸ್ತ್ರೀಯವಾಗಿ ಅಭ್ಯಾಸಿಸಿದ್ದರು. ಆದುದ ರಿಂದ ಮೆಂಡೆಲನು ಅನುಭವಶಾಲಿಗಳಾದ ಭ್ರಾತೃವರ್ಗಪವ ರಿಂದ ಆಗಾಗ್ಗೆ ಸಹಾಯ, ತಿಳಿವಳಿಕೆ ಮತ್ತು ಸಹಕಾರಗಳನ್ನು

ಪಡೆಯುತ್ತಿದ್ದನು. ಮೇಲಾಗಿ ತೋಟಗಾರಿಕೆಯಲ್ಲಿ ಹೆಚ್ಚು ಮಮತೆಯುಳ್ಳವನಾಗಿದ್ದುದರಿಂದ ಮತ್ತು ಹೆಚ್ಚು ಜ್ಞಾನ ಸಂಪಾದಿಸುವ ಸಲುವಾಗಿ ತತ್ವಜ್ಞಾನದ ಅಕೆಡಮಿ (Academy for Philosophy)ಯಲ್ಲಿ ಸೇರಿ ಅರ್ಥಶಾಸ್ತ್ರ, ಹಣ್ಣುಗಿಡಗಳನ್ನು ಬೆಳೆಯುವುದು ಮತ್ತು ದ್ರಾಕ್ಷಿ ಕೃಷಿಗಾರಿಕೆಯ ಬಗ್ಗೆ ಭಾಷಣಗಳನ್ನು ಕೇಳಿ ಜ್ಞಾನಾರ್ಜನೆ ಮಾಡಿ ಕೊಳ್ಳುತ್ತಿದ್ದನು. ಇದು ಕ್ರಿ.ಶ. ೧೮೪೬ರಲ್ಲಿ.

ಪ್ರಕೃತಿ ವಿಜ್ಞಾನದಲ್ಲಿ ಆಸಕ್ತಿ, ಅಭಿರುಚಿ, ಮತ್ತು ವ್ಯಾಮೋಹ ಹೆಚ್ಚಾಗಿದ್ದರೂ ಕ್ರೈಸ್ತಮತ, ಧರ್ಮಶಾಸ್ತ್ರದ ಅಧ್ಯಯನವನ್ನು ಕಡೆಗಣಿಸಿರಲಿಲ್ಲ. ಅದರಲ್ಲಿಯೂ ಕೂಡ ಶ್ರದ್ಧೆವಹಿಸಿದ್ದನು. ಕ್ರಿ. ಶ. ೧೮೪೮ರಲ್ಲಿ ಸನ್ಯಾಸಜೀವನಕ್ಕೆ ಅಗತ್ಯವಾಗಿಬೇಕಾಗಿದ್ದ ತತ್ವಶಾಸ್ತ್ರದ ಅಧ್ಯಯನವು ಯಶಸ್ವಿಯಾಗಿ ಮುಕ್ತಾಯಗೊಳಿಸಿದ್ದುದರಿಂದ ಅದರ ಪರೀಕ್ಷೆಗೆ ಕುಳಿತುಕೊಳ್ಳಲು ಏರ್ಪಾಡೂ ನಡೆದಿತ್ತು.

ಅಗಸ್ಟೀನಿಯನ್ ಭ್ರಾತೃವರ್ಗದವರು ಸೆಕೆಂಡರಿ ಶಿಕ್ಷಣಶಾಲೆಗಳಿಗೆ ಉಪಾಧ್ಯಾಯರುಗಳನ್ನು ಒದಗಿಸುವ ಕರ್ತವ್ಯವುಳ್ಳವರಾಗಿದ್ದುದರಿಂದ ಅನೇಕ ಜನ ಪಾದ್ರಿಗಳು ಉಪಾಧ್ಯಾಯರಾಗಿರುತ್ತಿದ್ದರು. ಮೆಂಡೆಲನು ಕ್ರಿ.ಶ. ೧೮೪೯ರಲ್ಲಿ ತತ್ವಶಾಸ್ತ್ರದ ಪರೀಕ್ಷೆಗೆ ಕುಳಿತುಕೊಳ್ಳುವಷ್ಟರಲ್ಲಿಯೇ ಜ್ನೈಮ್‌ನಲ್ಲಿದ್ದ ಪ್ರೌಢಶಾಲೆಗೆ (Imperial–Royal Gymnasium in Znaim) ಒಬ್ಬ ಬದಲಿಯ ಉಪಾಧ್ಯಾಯರ ಅಗತ್ಯವಿತ್ತು. ಆದಕಾರಣ ಮೆಂಡೆಲನಿಗೆ ಈ ತಾತ್ಕಾಲಿಕ ಉಪಾಧ್ಯಾಯ ವೃತ್ತಿಯ ಬಗ್ಗೆ ಆಹ್ವಾನ ಹೋಯಿತು. ಆದರದ ಕರೆಯು ಕರಗಿಹೋಗುವುದಕ್ಕೆ ಮುಂಚೆಯೇ ಮೆಂಡೆಲನು ಸಂತೋಷದಿಂದ ಓಗೊಟ್ಟು ಆ ಹುದ್ದೆಯನ್ನು ಒಪ್ಪಿಕೊಂಡನು.

ಇಂದಿನಂತೆ ಅಂದೂ ಕೂಡ ಪ್ರತಿಯೊಬ್ಬ ಉಪಾಧ್ಯಾಯನೂ ಬೋಧಕವೃತ್ತಿಯ ಅರ್ಹತಾ ಪತ್ರವನ್ನು ಪಡೆಯಬೇಕಾಗಿತ್ತು. ಅದಿಲ್ಲದಿದ್ದಲ್ಲಿ ಉಪಾಧ್ಯಾಯಗಿರಿಯು ದೊರೆಯುವಂತಿರಲಿಲ್ಲ. ಮೆಂಡೆಲನಿಗೆ ಉಪಾಧ್ಯಾಯ ವೃತ್ತಿಯನ್ನೇ ಅವಲಂಬಿಸ ಬೇಕೆಂಬ ಹೆಬ್ಬಯಕೆಯಿದ್ದರೂ, ಅವನಿಗೆ ಪೂರ್ವಭಾವಿಯಾಗಿ ವಿಶ್ವವಿದ್ಯಾನಿಲಯದ ಶಿಕ್ಷಣ ಮತ್ತು ತರಪೇತು ದೊರೆತಿರ ಲಿಲ್ಲ. ಅಲ್ಲದೆ ಅತ್ಯಗತ್ಯವಾದ ಸಾಧನವನ್ನು ಸಂಪಾದಿಸಲು ಆಶಿಸಿದರೂ, ಆಸ್ಟ್ರಿಯಾ-ಹಂಗೇರಿ ಚಕ್ರಾಧಿಪತ್ಯದ ರಾಜಕೀಯ ವಾತಾವರಣದಲ್ಲಿ ಸ್ವಲ್ಪಮಟ್ಟಿಗೆ ಅಶಾಂತಿಯಿದ್ದುದರಿಂದ ವಿಶ್ವವಿದ್ಯಾನಿಲಯದ ವ್ಯಾಸಂಗವನ್ನು ತಾತ್ಕಾಲಿಕವಾಗಿ ಮುಂದೂಡಬೇಕಾಯಿತು.

ಮೆಂಡೆಲನು ಜ್ನೈಮ್ ಪ್ರೌಢಶಾಲೆಯಲ್ಲಿ ಗ್ರೀಕ್ ಭಾಷೆ ಮತ್ತು ಸಾಮಾನ್ಯಗಣಿತವನ್ನು ಪಾಠಹೇಳಿಕೊಡಬೇಕಾಗಿತ್ತು. ಮಕ್ಕಳಿಗೆ ಸುಲಭರೀತಿಯಲ್ಲಿ ಸುಲಲಿತವಾಗಿ ಪಾಠ ಹೇಳಿ ಕೊಡುವ ಸಾಮರ್ಥ್ಯವನ್ನು ತಾನು ಪ್ರೌಢಶಾಲೆಯ ವಿದ್ಯಾರ್ಥಿ ಯಾಗಿದ್ದಾಗಲೇ ವಿಕಾಸಗೊಳಿಸಿಕೊಂಡಿದ್ದ ಆ ಪೂರ್ವ ತರಪೇತಿಯಿಂದಲೇ ಈಗ ಮಕ್ಕಳಿಗೆ ಮನದಟ್ಟಾಗುವಂತೆ ಪಾಠ ಹೇಳಿಕೊಡುವುದು ಸುಲಭಸಾಧ್ಯವಾಯಿತು. ಈ ಪ್ರೌಢ ವಿದ್ಯಾಶಾಲೆಯು ತಾನಿದ್ದ ಮಠಕ್ಕೆ ಸಾಕಷ್ಟು ದೂರ ದಲ್ಲಿದ್ದುದರಿಂದ ಹಗಲೆಲ್ಲಾ ಪಾಠಶಾಲೆಯಲ್ಲಿದ್ದು ಮಕ್ಕಳಿಗೆ ಪಾಠಹೇಳಿ, ರಾತ್ರಿಯ ವೇಳೆಯಲ್ಲಿ ಮಾತ್ರ ಮೆಂಡೆಲನು ಮಠಕ್ಕೆ ಹಿಂದಿರುಗುತ್ತಿದ್ದನು.

ಮೆಂಡೆಲನ ದಕ್ಷತೆ ಮತ್ತು ಸಾಮರ್ಥ್ಯಗಳನ್ನು ಮನ ಗಂಡಿದ್ದ, ಅವನ ಬಗ್ಗೆ ದೃಢ ವಿಶ್ವಾಸವನ್ನು ಬೆಳೆಸಿಕೊಂಡಿದ್ದ

ಆ ಪ್ರೌಢಶಾಲೆಯ ಪ್ರಧಾನೋಪಾಧ್ಯಾಯ ಮತ್ತು ಇತರ ಸಹೋಪಾಧ್ಯಾಯರೂ ಮೆಂಡೆಲನನ್ನು ಬೋಧಕವೃತ್ತಿಯ ಯೋಗ್ಯತಾ ಪತ್ರವನ್ನು ಪಡೆಯುವ ಸಲುವಾಗಿ ಪರೀಕ್ಷೆಗೆ ಕುಳಿತುಕೊಳ್ಳುವಂತೆ ಬಲಾತ್ಕರಿಸಿದರು. ಆಗ ಮೆಂಡೆಲನಿಗೆ ಕೇವಲ ಒಂದು ವರ್ಷದ ಬೋಧನೆಯ ಅನುಭವವಾಗಿತ್ತು. ಅವನು ಸಂಪಾದಿಸಿದ್ದ ವಿಜ್ಞಾನದ ಅರಿವು ಸಂಪೂರ್ಣವಾಗಿ ಸ್ವಯಂಬೋಧಿತವಾಗಿತ್ತು. ಮೆಂಡೆಲನು ಸಹೋಪಾಧ್ಯಾಯರ ಹಿತವಚನಕ್ಕೆ ಬೆಲೆಕೊಟ್ಟು ೧೮೫೦ನೆಯ ವಸಂತ ಋತುವಿನಲ್ಲಿ ಬೋಧಕವೃತ್ತಿಯ ಅರ್ಹತಾ ಪತ್ರವನ್ನು ಪಡೆಯುವ ಸಲುವಾಗಿ ಸಾರ್ವಜನಿಕ ಪರೀಕ್ಷೆಗೆ ಕುಳಿತನು. ಈ ಬಗೆಯ ಪರೀಕ್ಷೆಗಳನ್ನು ವಿಯನ್ನಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕವರ್ಗದವರು ನಡೆಸುತ್ತಿದ್ದರು. ಅಲ್ಲದೆ ಪರೀಕ್ಷೆಗೆ ಕುಳಿತುಕೊಳ್ಳುವ ವಿದ್ಯಾರ್ಥಿಗಳಂತೂ ಸಾಮಾನ್ಯವಾಗಿ ವಿಶ್ವವಿದ್ಯಾನಿಲಯದಲ್ಲಿ ಹಲವಾರು ವರ್ಷಗಳ ಕಾಲ ವಿಜ್ಞಾನದಲ್ಲಿ ವ್ಯಾಸಂಗ ಪಡೆದವರಾಗಿರುತ್ತಿದ್ದರು. ಅಂದ ಮೇಲೆ ಇಂತಹ ವಿದ್ವತ್‌ಪೂರ್ಣವಾದ ಪರೀಕ್ಷೆಯಲ್ಲಿ ಮೆಂಡೆಲನು ಪ್ರಕೃತಿ ವಿಜ್ಞಾನ ಮತ್ತು ಭೌತಶಾಸ್ತ್ರಗಳಲ್ಲಿ ಬರೆದ ಉತ್ತರಗಳು ಎಷ್ಟರ ಮಟ್ಟಿಗೆ ಸಮಂಜಸವಾಗಿದ್ದುವೆಂಬುದನ್ನು ನಾವೇ ಊಹಿಸಿಕೊಳ್ಳಬಹುದು. ಅಂತೂ ಅವನು ಈ ಪರೀಕ್ಷೆಯಲ್ಲಿ ಭೌತಶಾಸ್ತ್ರದಲ್ಲಿ ತೇರ್ಗಡೆಯಾದನೇ ಹೊರತು ಪ್ರಕೃತಿ ವಿಜ್ಞಾನದಲ್ಲಿ ತೇರ್ಗಡೆಯಾಗಲಿಲ್ಲ.

ಇಷ್ಟೇ ಅಲ್ಲ, ಮೆಂಡೆಲನು ಬರೆದ ಪ್ರಶ್ನೋತ್ತರಗಳನ್ನು ಓದಿದ ಪರೀಕ್ಷಾ ಪರಿಣತರು ಮೆಂಡೆಲನ ಬಗ್ಗೆ "ಪರೀಕ್ಷಾಭ್ಯರ್ಥಿಯು ಕೆಳದರ್ಜೆಯ ಪಾಠಶಾಲೆಗಳಲ್ಲಿ ಭೌತಶಾಸ್ತ್ರ ಮತ್ತು ಪ್ರಕೃತಿ

ಶಾಸ್ತ್ರಗಳನ್ನು ಬೋಧನೆಮಾಡಲು ಅರ್ಹನಾಗಿಲ್ಲವೆಂದು ತೀರ್ಮಾನಕ್ಕೆ ಬರಬೇಕಾಗಿದೆ" ಎಂದು ತಮ್ಮ ವರದಿಯಲ್ಲಿ ಬರೆದರು. ಹುಣ್ಣಿನ ಮೇಲೆ ಉಪ್ಪು ಎರಚಿದಂತೆ ಇದನ್ನು ಓದಿದ ಮೆಂಡೆಲನಿಗೆ ಇನ್ನೆಷ್ಟು ದುಃಖವಾಗಿರಬೇಕು? ಎಷ್ಟರ ಮಟ್ಟಿಗೆ ನಿರಾಶನಾಗಿರಬೇಕು?

ಸೋಲು ಜಯದ ಸೋಪಾನವೆಂಬುದು ಮೆಂಡೆಲನ ಮತ. ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲವೆಂದು ಧೃತಿಗೆಡ ಲಿಲ್ಲ. ಚಿನ್ನಕ್ಕೆ ಪುಟವಿಟ್ಟಂತೆ ಬೋಧಕ ವೃತ್ತಿಯಲ್ಲಿ ಹರ್ಷ ಅಧಿಕವಾಯಿತು; ಉತ್ಸಾಹ ಇಮ್ಮಡಿಯಾಯಿತು.

ಆದರೂ ಪರೀಕ್ಷರು ಮೆಂಡೆಲನ ಮೂಲಭೂತವಾದ ಸಾಮರ್ಥ್ಯವನ್ನು ಗಮನಿಸದೇ ಇರಲಿಲ್ಲ. ತಮ್ಮ ವರದಿಯಲ್ಲಿ ಮೆಂಡೆಲನಿಗೆ ವಿದ್ಯಾಭ್ಯಾಸದ ಮತ್ತು ಉಪಾಧ್ಯಾಯ ವೃತ್ತಿಯ ತರಬೇತು ಮತ್ತು ಶಿಕ್ಷಣಬೇಕೆಂದು ಶಿಫಾರಸುಮಾಡಿದರು. ಮೇಲಾಗಿ ಮಠದ ಮುಖ್ಯಾಧಿಕಾರಿಗಳನ್ನು ಮೆಂಡೆಲನನ್ನು ಮುಂದಿನ ಹೆಚ್ಚಿನ ವ್ಯಾಸಂಗಕ್ಕಾಗಿ ವಿಯನ್ನಾ ವಿಶ್ವವಿದ್ಯಾ ನಿಲಯಕ್ಕೆ ಕಳುಹಿಸಬೇಕೆಂದು ಒತ್ತಾಯಮಾಡಿದರು.

ಅಂದಿಗೆ ನಾಪ್ ಪಾದ್ರಿ (Prelate Napp) ಯವರು ಆಲ್ಟ ಬ್ರೂಯಿನ್ ಕ್ರೈಸ್ತಮಠದ ಮುಖ್ಯಾಧಿಕಾರಿಗಳಾಗಿದ್ದರು. ಮಠದ ಎಲ್ಲಾ ಬಗೆಯ ಆಡಳಿತವೂ ಅವರ ನಿಯಂತ್ರಣ ದಲ್ಲಿತ್ತು. ಪರೀಕ್ಷಕರ ಶಿಫಾರಸಿನ ಪ್ರಕಾರ ವಿಯನ್ನಾ ವಿಶ್ವ ವಿದ್ಯಾನಿಲಯದಲ್ಲಿ ಮೆಂಡೆಲನು ಎರಡು ವರ್ಷಗಳಕಾಲ ವಿಜ್ಞಾನ ಕ್ಷೇತ್ರದಲ್ಲಿ ವ್ಯಾಸಂಗಮಾಡಲು ಏರ್ಪಾಡುಮಾಡಿ ದರು ಮತ್ತು ಪ್ರೋತ್ಸಾಹ ನೀಡಿದರು. ಅದರಂತೆ ಮೆಂಡೆಲನು ೧೮೫೧ ರಲ್ಲಿ ವಿಯನ್ನಾ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿ

ಗಣಿತಶಾಸ್ತ್ರ, ಭೌತಶಾಸ್ತ್ರ ಮತ್ತು ಪ್ರಕೃತಿವಿಜ್ಞಾನ (ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಲುಪ್ತಜೀವಿಶಾಸ್ತ್ರ)ಗಳನ್ನು ಅಧ್ಯಯನ ಮಾಡಲಾರಂಭಿಸಿದನು.

ವಿಶ್ವವಿದ್ಯಾನಿಲಯದಲ್ಲಿ ಮೆಂಡೆಲನ ವಿದ್ಯಾರ್ಥಿಜೀವನದ ಬಹುಮುಖ ಪ್ರತಿಭೆಗೆ ಪ್ರೋತ್ಸಾಹ ಒದಗಿತು. ಅವನಿಗೆ ವೈಜ್ಞಾನಿಕ ತರಪೇತು ಮತ್ತು ವಿಶ್ಲೇಷಣೆ ಬಂದುದು ಈ ಕಾಲದಲ್ಲಿ. ಪ್ರಯೋಗಪರೀಕ್ಷೆಗಳಿಗೆ ಅತ್ಯಗತ್ಯವಾದ ನಿಖರ ವಾದ ವೈಜ್ಞಾನಿಕ ಪ್ರವೃತ್ತಿ ಮೊಳೆತು, ಮೂಡಿದ್ದು ಈ ಕಾಲ ದಲ್ಲಿಯೇ. ಯಾಂತ್ರಿಕ ಕೌಶಲ್ಯ ಮತ್ತು ಚತುರತೆಯು ಹರಿತ ವಾದದ್ದು ಈ ಸಮಯದಲ್ಲಿಯೇ. ಗಣಿತಶಾಸ್ತ್ರದ ಸಂಭವ ನೀಯತೆಯ ಮೂಲತತ್ವಗಳ (Basic Theory of Probability) ಪ್ರಾಮುಖ್ಯತೆಯು ಅವನಿಗೆ ಮನದಟ್ಟಾದುದು ಈ ಸಂದರ್ಭದಲ್ಲಿಯೇ.

ಅಂತೂ ಮೆಂಡೆಲನಿಗೆ ವಿಯನ್ನಾದಲ್ಲಿ ಎರಡುವರ್ಷಗಳ ವಿದ್ಯಾರ್ಥಿಜೀವನ ನಿಜವಾಗಿಯೂ ಆನಂದಮಯವಾಗಿತ್ತು. ಹರ್ಷೋತ್ಸಾಹಗಳಿಂದ ಮನಸ್ಸಿನಲ್ಲಿ ನೆಮ್ಮದಿ ತುಂಬಿತ್ತು. ಈ ಕಾಲದಲ್ಲಿ ಆಗಾಗ್ಗೆ ತನ್ನ ತೌರೂರಾದ ಹೈನ್ ಜೆನ್‌ಡೋರ್ಫ್‌ಗೆ ಹೋಗಿ ತನ್ನ ಅಕ್ಕತಂಗಿಯರನ್ನೂ, ಬಂಧುವರ್ಗದವರನ್ನೂ ಮತ್ತು ಆಪ್ತಮಿತ್ರರನ್ನೂ ನೋಡಿಬರುವ ಸದವಕಾಶ ಸಿಗು ತ್ತಿತ್ತು. ಇದರಿಂದ ಅವನ ಮನಸ್ಸಿಗೆ ಎಷ್ಟೋ ಆಹ್ಲಾದಕರ, ಆನಂದ.

ಮೆಂಡೆಲನು ೧೮೫೩ ರಲ್ಲಿ ವಿಶ್ವವಿದ್ಯಾನಿಲಯದ ತನ್ನ ಎರಡು ವರ್ಷದ ವ್ಯಾಸಂಗವನ್ನು ಮುಗಿಸಿ ಹಿಂತಿರುಗಿದನು. ಅಷ್ಟುಹೊತ್ತಿಗೆ ಸುಮಾರು ಒಂದು ವರ್ಷದ ಹಿಂದೆ ಬ್ರೂಯಿನ್

ಪುಟ್ಟ ಪಟ್ಟಣದಲ್ಲಿ ರಿಯಲ್ ಶೂಲೆ (Real Schule) ಎಂಬ ಆಧುನಿಕ ಪಾಠಶಾಲೆಯು ಪ್ರಾರಂಭವಾಗಿತ್ತು. ಅದು ಮೆಂಡೆಲನ ಬರುವಿಕೆಯನ್ನೇ ನಿರೀಕ್ಷಿಸುತ್ತಿರುವಂತಿತ್ತು. ಸರಿ, ಆಗತಾನೆ ವ್ಯಾಸಂಗವನ್ನು ಮುಗಿಸಿಕೊಂಡು ಹಿಂತಿರುಗಿದ್ದ ಮೆಂಡೆಲನನ್ನು ವಿಜ್ಞಾನ ಬೋಧಕನನ್ನಾಗಿ ನೇಮಿಸಲಾಯಿತು. ತತ್ಪರಿಣಾಮವಾಗಿ ಮಕ್ಕಳಿಗೆ ಭೌತಶಾಸ್ತ್ರ ಮತ್ತು ಪ್ರಕೃತಿ ವಿಜ್ಞಾನವನ್ನು ಬೋಧಿಸಬೇಕಾಗಿತ್ತು. ಈ ಬೋಧಕವೃತ್ತಿಯ ಜೀವನದಲ್ಲಿ ಅವನಿಗೆ ಬೌದ್ಧಿಕ ವಾತಾವರಣ, ವಿರಾಮ ಮತ್ತು ಪ್ರಯೋಗ ಪರೀಕ್ಷೆಗಳಿಗೆ ಪ್ರೇರಕ ಸನ್ನಿವೇಶಗಳು ದೊರೆತವು.

ಮೆಂಡೆಲನು ವಿಯನ್ನಾ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗವನ್ನು ಯಶಸ್ವಿಯಾಗಿ ಮುಗಿಸಿಕೊಂಡಮೇಲೆ ಮತ್ತು ಎರಡು ವರ್ಷಗಳಕಾಲ ಆಧುನಿಕ ಪ್ರೌಢ ಪಾಠಶಾಲೆಯಲ್ಲಿ ಭೌತಶಾಸ್ತ್ರ ಮತ್ತು ಪ್ರಕೃತಿ ವಿಜ್ಞಾನವನ್ನು ಬೋಧಿಸಿ ತರಪೇತು ಪಡೆದ ಮೇಲೆ (ಅಂದರೆ ೧೮೫೬ನೇ ಮೇ ತಿಂಗಳಲ್ಲಿ), ವೃತ್ತಿಯ ಯೋಗ್ಯತಾರ್ಹತೆಯನ್ನು ಪಡೆಯುವ ಸಲುವಾಗಿ ಮತ್ತೆ ಪರೀಕ್ಷೆಗೆ ಕುಳಿತನು. ಪುನಃ ಅನುತ್ತೀರ್ಣನಾದನು !!! ಉಪಾಧ್ಯಾಯವೃತ್ತಿಯ ಅರ್ಹತಾಪತ್ರ ದೊರೆಯಲಿಲ್ಲ. ಅವನು ಏಕೆ ತೇರ್ಗಡೆ ಹೊಂದಲಿಲ್ಲವೆಂಬುದು ನಿಜವಾಗಿಯೂ ಸಮಸ್ಯೆಯಾಗಿ ಉಳಿದಿದೆ. ಮೆಂಡೆಲನ ಜೀವನ ಚರಿತ್ರೆಯನ್ನು ಪರಿಶೋಧನೆಮಾಡಿ ಉದ್ಗ್ರಂಥವನ್ನು ರಚಿಸಿ ಆಧಾರಮೂರ್ತಿ ಎನಿಸಿಕೊಂಡಿರುವ ಹ್ಯೂಗೋ ಇಲ್ಟಿಸ್ (Hugo Iltis) ರವರ ಪ್ರಕಾರ ಮೆಂಡೆಲನು Viva Voce ಪರೀಕ್ಷೆಯಲ್ಲಿ ಮನನೊಂದು ರೇಗಿ ಪರೀಕ್ಷೆಯಿಂದ ಹಿಂತಿರುಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಪ್ರತಿಭಾನ್ವಿತ ಅಭ್ಯರ್ಥಿಯು ಪರೀಕ್ಷೆಗೆ ಸಾಕಷ್ಟು

ಸಜ್ಜಿತನಾಗಿರಲಿಲ್ಲವೇ ? ವೈಜ್ಞಾನಿಕ ವಿಷಯದಲ್ಲಂತೂ ಮೆಂಡೆಲನಿಗೆ ಪೂರ್ಣ ಪರಿಜ್ಞಾನವಿತ್ತು. ಆದರೆ ಅವನು ಬರೆದ ಉತ್ತರಗಳು ಪರೀಕ್ಷಕರಿಗೆ ಅರ್ಥವಾಗಿಲ್ಲದಿರಬೇಕು. ಇಲ್ಲವೆ ಆಗಿನ ಕಾಲದಲ್ಲಿ ವೈಜ್ಞಾನಿಕ ಪಾರಿಭಾಷಿಕ ಪದಗಳಿಗೆ ಸಂಪ್ರದಾಯಕವಾಗಿ ಬಳಸುತ್ತಿದ್ದ ಪದಗಳಿಗೆ ಬದಲಾಗಿ ತನ್ನದೇ ಆದ ಪದಗಳನ್ನು ಕಪಿಮುಷ್ಟಿಯಿಂದ ಉಪಯೋಗಿಸಿದ್ದರಿಂದ ಪರೀಕ್ಷಕರಿಗೆ ಬೇಸರವೆನಿಸಿತೋ ? ಅಂತೂ ಮೆಂಡೆಲನು ಅಸಾಧಾರಣವಾದ ಸ್ವಾತಂತ್ರ್ಯ ಪ್ರವೃತ್ತಿಯುಳ್ಳವನಾಗಿದ್ದನು; ಅತ್ಯಂತ ಸೂಕ್ಷ್ಮಗ್ರಾಹಿ. ತನ್ನ ಮನಸ್ಸಿಗೆ ಸರಿಯೆಂದು ತೋರಿದರೆ ಸಾಕು, ಹಠದಿಂದ ಅದನ್ನೇ ಕೊನೆಯವರೆಗೂ ಮೆಲಕು ಹಾಕುತ್ತಿದ್ದ. ಅಂತೂ ಒಬ್ಬ ಮಹತ್ಪೂರ್ಣ ವಿಜ್ಞಾನಿಯ ವೈಜ್ಞಾನಿಕ ಪ್ರತಿಭೆ ಮತ್ತು ಸಾಮರ್ಥ್ಯಗಳ ಮೇಲೆ ಸಮಕಾಲೀನ ವೈಜ್ಞಾನಿಕ ಪರಿಣತರು ಕೊಟ್ಟತೀರ್ಪು ಇದು !

ಮೆಂಡೆಲನಿಗೆ ಉಪಾಧ್ಯಾಯವೃತ್ತಿಯ ಅರ್ಹತಾ ಪತ್ರವನ್ನು ಸಂಪಾದಿಸಿಕೊಳ್ಳಲಿಲ್ಲವೆಂದು ಆ ಪ್ರೌಢಶಾಲೆಯ ಮುಖ್ಯಾಧಿಕಾರಿಗಳು ಅವನು ಅಸಮರ್ಥನೆಂದೂ ಮತ್ತು ಅನರ್ಹನೆಂದೂ ಪರಿಗಣಿಸಲಿಲ್ಲ. ಮೆಂಡೆಲನ ಸಾಮರ್ಥ್ಯ, ಯೋಗ್ಯತೆ ಮತ್ತು ದಕ್ಷತೆಗಳೆಲ್ಲವೂ ಅಧಿಕಾರಿಗಳಿಗೆ ವೇದ್ಯವಾಗಿತ್ತು. ಅವನ ಪಾಠಪ್ರವಚನಗಳಲ್ಲಿ ಸಂಪೂರ್ಣ ತೃಪ್ತಿಯಿತ್ತು. ಅದರಿಂದಲೇ ಮೆಂಡೆಲನು ತಾನಾಗಿಯೇ ಉಪಾಧ್ಯಾಯ ವೃತ್ತಿಯನ್ನು ಬಿಟ್ಟು ಹೋಗುವವರೆಗೂ (ಹನ್ನೆರಡು ವರ್ಷಗಳಕಾಲ) ಸಹೋಪಾಧ್ಯಾಯನಾಗಿಯೇ ಉಳಿದನು.

ಮೆಂಡೆಲನು ಉಪಾಧ್ಯಾಯವೃತ್ತಿಯಲ್ಲಿ ಆದರ್ಶಮೂರ್ತಿ;

ಜನ್ಮತಃ ಬೋಧಕನಾದವನಂತಿದ್ದ ಇವನನ್ನು ಕಂಡರೆ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚು; ಪಂಚಪ್ರಾಣ. ಇತರ ಉಪಾಧ್ಯಾಯರುಗಳಿಗೂ ಇವನನ್ನು ಕಂಡರೆ ಪೂರ್ಣವಿಶ್ವಾಸ. ಇವನು ಜನಾನುರಾಗಿಯಾಗಿದ್ದನು.

ಮೆಂಡೆಲನು ತನ್ನ ವಿದ್ಯಾರ್ಥಿಗಳನ್ನು ಆಗಾಗ್ಗೆ ಮಠಕ್ಕೆ ಬರಮಾಡಿಕೊಳ್ಳುತ್ತಿದ್ದನು. ಅವರನ್ನು ತೋಟಕ್ಕೆ ಕರೆದು ಕೊಂಡುಹೋಗಿ, ತಾನು ಬೆಳೆಸಿ ಸಾಕಿದ ಜೇನು, ಹಣ್ಣು ಗಿಡಗಳು ಮತ್ತು ಬಟಾಣಿ ಗಿಡಗಳಮೇಲೆ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು ತೋರಿಸಿ ವಿವರಿಸುತ್ತಿದ್ದನು.

ಮೆಂಡೆಲನ ಪಾಠಕ್ರಮ ವಿದ್ಯಾರ್ಥಿಗಳಿಗೆ ಬೋಧನಪ್ರದವೂ ಮತ್ತು ಸ್ವಾರಸ್ಯಮಯವೂ ಆಗಿರುತ್ತಿತ್ತು. ಆದಕಾರಣ ವಿದ್ಯಾರ್ಥಿಗಳು ಅವನ ಪಾಠಗಳನ್ನು ಕೇಳಲು ಕಾತುರರಾಗಿ ರುತ್ತಿದ್ದರು. ಹಾಸ್ಯರಸವನ್ನು ಮಕ್ಕಳ ಮನೋರಂಜನೆಗಾಗಿ ಬಳಸುತ್ತಿದ್ದನು. ಒಂದು ಬಾರಿ ಒಂದು ಹಾಸ್ಯ ಪ್ರಸಂಗವನ್ನು ವಿವರಿಸುತ್ತಾ ತನ್ನ ಜೀವನದಲ್ಲಿ ನಡೆದ ಘಟನೆಯೊಂದನ್ನು ವಿವರಿಸಿದನು. ಅದು ಏನೆಂದರೆ, ಒಂದು ರಾತ್ರಿ ಎಲ್ಲರೂ ನಿದ್ರಿ ಸುತ್ತಿದ್ದಾಗ ಒಂದು ಪುಟ್ಟಮುಳ್ಳು ಹಂದಿ (Hedgehog) ತೆವಳಿ ಕೊಂಡು ಬಂದು ತನ್ನ ಬೂಟ್ಸಿನಲ್ಲಿ ಅವಿತುಕೊಂಡಿದ್ದನ್ನು ಕಾಣದೆ ಮಾರನೆ ಬೆಳಿಗ್ಗೆ ಬೂಟ್ಸುಗಳನ್ನು ಕಾಲಿಗೆ ಹಾಕಿ ಕೊಳ್ಳುತ್ತಿದ್ದಾಗ ತನ್ನ ಕಾಲ್ಬೆರಳುಗಳಿಗೆ ಆ ಪ್ರಾಣಿಯ ಸಾವಿರಾರು ಮುಳ್ಳುಗಳು ಚುಚ್ಚಿದ ಸಂಗತಿಯನ್ನು ಸ್ವಾರಸ್ಯ ಮಯವಾಗಿ, ಅಂತೆಯೇ ಗಾಂಭೀರ್ಯದಿಂದ ವಿವರಿಸಿದನು. ಹೀಗೆ ಹುಡುಗರೊಡನೆ ತಾನೂ ನಕ್ಕು ಮಕ್ಕಳನ್ನೂ ಲವಲವಿಕೆ ಯಿಂದಿಡುತ್ತಿದ್ದನು.

ಊರಿಗೆ ಸರ್ಕಸ್ ಬಂದ ಸಂದರ್ಭಗಳಲ್ಲೆಲ್ಲಾ ತನ್ನ ವಿದ್ಯಾರ್ಥಿಗಳನ್ನು ಕರೆದುಕೊಂಡುಹೋಗಿ ಅಲ್ಲಿಯ ಪ್ರಾಣಿಗಳೊಡನೆ ಸರಸಸಲ್ಲಾಪಗಳನ್ನು ಮಾಡುವುದೆಂದರೆ ಮೆಂಡೆಲನಿಗೆ ಆನಂದ. ಇಂತಹ ಸಂದರ್ಭಗಳಲ್ಲಿ ಸರಸವು ವಿರಸಗೊಂಡ ಪ್ರಸಂಗವೂ ಉಂಟು. ಒಮ್ಮೆ ಕೋತಿಗಳನ್ನಿಟ್ಟಿದ್ದ ಬೋನಿನ ಬಳಿಹೋಗಿ, ಅವುಗಳ ಗಮನವನ್ನು ತಮ್ಮ ಕಡೆ ಸೆಳೆಯುವುದಕ್ಕಾಗಿ ಪ್ರಯತ್ನಪಟ್ಟಾಗ, ಅಕಸ್ಮಾತ್ತಾಗಿ ಬೋನಿನಲ್ಲಿದ್ದ ದೊಡ್ಡಕೋತಿಯು ಹತ್ತಿರದಲ್ಲಿಯೇ ನಿಂತಿದ್ದ ಮೆಂಡೆಲನ ಕನ್ನಡಕವನ್ನು ಕಸಿದುಕೊಂಡಿತು. ಮೆಂಡೆಲನು ಕನ್ನಡಕವನ್ನು ಮತ್ತೆ ಪಡೆಯಲು ಬಹಳ ಪ್ರಯಾಸಪಟ್ಟನು. ಈ ಸೆಣಸಾಟದಲ್ಲಿ ಮೆಂಡೆಲನ ಮುಖ ಮತ್ತು ಕೈಗಳು ಪರಚಿಹೋದುವು. ಅಂತೂ ಅಂತ್ಯದಲ್ಲಿ ಕನ್ನಡಕವನ್ನು ಪಡೆದ ಆ ದೃಶ್ಯ ಭಯಾನಕವಾಗಿದ್ದರೂ ಹಾಸ್ಯಮಯವಾಗಿತ್ತು. ಹುಡುಗರು ನಕ್ಕಂತೆ ತಾನೂ ನಕ್ಕನು. ತನಗೇನೂ ಆಗಿಲ್ಲವೆಂದು ಹುಡುಗರಿಗೆ ಹೇಳಿ ಶಾಲೆಗೆ ಹಿಂತಿರುಗಿದ್ದೂ ಉಂಟು.

ಪ್ರತಿಯೊಬ್ಬ ಹುಡುಗನ ಯೋಗಕ್ಷೇಮವನ್ನೂ ಮೆಂಡೆಲನು ಆಗಿಂದಾಗ್ಗೆ ವಿಚಾರಿಸುತ್ತಿದ್ದನು. ಪಾಠಪ್ರವಚನಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳದ ವಿದ್ಯಾರ್ಥಿಗಳನ್ನು ಮಠಕ್ಕೆ ಕರೆದು ಪಾಠ ಹೇಳಿಕೊಡುತ್ತಿದ್ದನು. ಎಲ್ಲಾ ಹುಡುಗರನ್ನೂ ಸಮದೃಷ್ಟಿಯಿಂದ, ಅತ್ಯಾದರದಿಂದ ಕಾಣುತ್ತಿದ್ದುದರಿಂದ ಹುಡುಗರೆಲ್ಲರಿಗೂ ಇವನನ್ನು ಕಂಡರೆ ಪ್ರೀತಿ. ಯಾವ ವಿದ್ಯಾರ್ಥಿಯಾದರೂ ಪರೀಕ್ಷೆಯಲ್ಲಿ ಕಡಮೆ ಅಂಕಗಳನ್ನು ಸಂಪಾದಿಸಿದ್ದರೆ ವಿದ್ಯಾರ್ಥಿ ಕೇಳಿದಷ್ಟು ಅಂಕಗಳನ್ನು ಸೇರಿಸಿ ತೇರ್ಗಡೆ ಮಾಡಿಸುತ್ತಿದ್ದನು; ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ

ತೃಪ್ತಿಗೊಳಿಸುತ್ತಿದ್ದನು. ಹುಡುಗರೊಡನೆ ಸರಸಸಲ್ಲಾಪ ಗಳಿಂದ, ಸ್ನೇಹಸ್ವಭಾವದಿಂದ ಇದ್ದುಕೊಂಡು ಅವರ ಹಲ ವಾರು ಸಮಸ್ಯೆಗಳನ್ನು ಬಗೆಹರಿಸುತ್ತಿದ್ದನು.

ಉಪಾಧ್ಯಾಯವೃತ್ತಿಯು ಮೆಂಡೆಲನಿಗೆ ಹರ್ಷವನ್ನು ಕೊಟ್ಟಿತು. ಅವನಿಗೆ ವೃತ್ತಿಯಲ್ಲಿ ನಿಷ್ಠೆ ಮತ್ತು ಶ್ರದ್ಧೆ ಹೆಚ್ಚಿದುವು. ಸ್ಥೂಲವಾಗಿ ಹೇಳುವುದಾದರೆ ಅವನ ಬೋಧಕ ಜೀವನ ನಿಜಕ್ಕೂ ಯಶಸ್ವಿಯಾಗಿತ್ತು.

## ೩. ತಳಿಮಿಶ್ರಣ ಪ್ರಯೋಗಗಳು

ಮೆಂಡೆಲನು ರಿಯಲ್‌ಷೂಲೆಯಲ್ಲಿ ಉಪಾಧ್ಯಾಯನಾಗಿದ್ದ ಕಾಲ ನಿಜವಾಗಿಯೂ ಅವನ ಸ್ವರ್ಣಯುಗ. ಅದು ಅವನಿಗೆ ಸುಖ, ಶಾಂತಿ, ಜಯ ಮತ್ತು ಕೀರ್ತಿಯನ್ನು ಲಭಿಸಿಕೊಟ್ಟ ಕಾಲ. ಬಟಾಣಿ ಗಿಡಗಳಮೇಲೆ ಹೆಸರುಗೊಂಡ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು ನಡೆಸಿ ಅವನು ಸಿದ್ಧಿ ಪಡೆದಕಾಲ. ಮೆಂಡೆಲನ ಹೆಸರನ್ನು ಅಮರಗೊಳಿಸಿದ ಚಿರಸ್ಮರಣೀಯಕಾಲ ಅದೇ. ಆನುವಂಶೀಯತೆಯ ಮೂಲಭೂತವಾದ ನಿಯಮಾವಳಿ ಗಳನ್ನು ಆವಿಷ್ಕಾರಗೊಳಿಸಿ ಜಗತ್ತಿಗೆ ಬೆಳಕನ್ನು ಚೆಲ್ಲಿ, ತಳಿ ವಿಜ್ಞಾನಕ್ಕೆ ಸುಭದ್ರವಾದ ತಳಹದಿಯನ್ನು ಹಾಕಿ, ಜೀವ ವಿಜ್ಞಾನದ ಹೊಸ ಬಂಡಾರದ ಹೆಬ್ಬಾಗಿಲನ್ನು ತೆರೆದು ಜ್ಞಾನ ಸುಧೆಯನ್ನು ದಾನವಾಗಿ ಜಗತ್ತಿಗೆ ಧಾರೆಯೆರೆದ ಕಾಲವದು.

ಮೆಂಡೆಲನಿಗೆ ವೈಜ್ಞಾನಿಕ ಮಹಾಕಾಂಕ್ಷೆಗಿಂತ ಪ್ರಕೃತಿಯ ಮೇಲಿನ ಕುತೂಹಲ ಹಿರಿದಾಗಿತ್ತು. ಸಾಕು ಪ್ರಾಣಿಗಳನ್ನು ಕಂಡರೆ ಅವನಿಗೆ ತುಂಬಾ ಪ್ರೀತಿ. ಕಾಡಿನಲ್ಲಿ ಸಸ್ಯಜೀವಿಗಳ ಜೀವನವನ್ನು ನೋಡಿದರೆ ಅವನಿಗೆ ಆನಂದ. ಅವನು ತನ್ನ

ಜೀವಿತದಲ್ಲಿ ಒಮ್ಮೆ ನರಿಯನ್ನು ಕೆಲಕಾಲ ಮುದ್ದಿಗಾಗಿ ಸಾಕಿದ್ದೂ ಉಂಟು. ತನ್ನ ಮಠದ ಕೊಠಡಿಯಲ್ಲಿ ಪಳಗಿಸಿ ಸಾಧುಮಾಡಿದ ಇಲಿಗಳನ್ನು ಸಾಕುತ್ತಿದ್ದನು. ಆಗಾಗ್ಗೆ ಇಲಿಗಳ ಸಂತಾನದಲ್ಲಿ ಬಗೆಬಗೆಯ ಇಲಿಮರಿಗಳನ್ನು ನೋಡಿ ಆನುವಂಶಿಕ ಪ್ರವೃತ್ತಿ ಮತ್ತು ನಡವಳಿಕೆಗಳನ್ನು ನೋಡಿ ಚಕಿತಗೊಳ್ಳುತ್ತಿದ್ದನು. ಪ್ರಾಯಶಃ ಇದು ಆನುವಂಶೀಯತೆಯ ಅಧ್ಯಯನದಲ್ಲಿ ಅವನ ಕುತೂಹಲವನ್ನು ಮತ್ತೆ ಕೆರಳಿಸಿರಬೇಕು. ಆನುವಂಶೀಯತೆಯ ಪ್ರಯೋಗ ಪರೀಕ್ಷೆಗಳಿಗೆ ಇದೇ ನಾಂದಿಯಾಗಿರಬೇಕು.

ಇಲಿಗಳ ಮೇಲೆ ನಡೆಸಿದ ತಳಿಮಿಶ್ರಣ ಪ್ರಯೋಗಗಳು ಮೆಂಡೆಲನಲ್ಲಿ ಹೊಸ ಬೆಳಕನ್ನು ಚೆಲ್ಲಿದುವು. ಆನುವಂಶೀಯತೆಯ ಅಧ್ಯಯನಕ್ಕೆ ಅಗತ್ಯವಾಗಿ ಮತ್ತು ಆವಶ್ಯಕವಾಗಿ ಸಂತಾನದ ಮರಿಗಳ ಸಂಖ್ಯೆ ಅತ್ಯಧಿಕವಾಗಿದ್ದಷ್ಟೂ ಅನುಕೂಲವೆಂಬುದು ಅವನಿಗೆ ಮನವರಿಕೆಯಾಯಿತು. ಇದರಿಂದ ಮಕ್ಕಳ ಅಥವಾ ಮರಿಗಳ ಸಂಖ್ಯೆ ಹೆಚ್ಚಿದಂತೆಲ್ಲಾ ತಂದೆತಾಯಿಗಳ ಮತ್ತು ಪೂರ್ವಜರ ಗುಣಲಕ್ಷಣಗಳು ಯಾವ ರೀತಿಯಲ್ಲಿ, ಯಾವ ಪ್ರಮಾಣದಲ್ಲಿ ಮತ್ತು ಹೇಗೆ ಪ್ರಸಾರವಾಗುತ್ತವೆಂಬುದು ಸ್ಪಷ್ಟವಾಯಿತು. ಆದುದರಿಂದ ಅಧಿಕ ಸಂಖ್ಯೆಯಲ್ಲಿ ಬೀಜೋತ್ಪತ್ತಿ ಮಾಡುವ ಮತ್ತು ಸುಲಭ ರೀತಿಯಲ್ಲಿ ಬೆಳೆವ ಸಸ್ಯಗಳು ಆನುವಂಶೀಯತೆಯ ತತ್ವಾನ್ವೇಷಣೆಗೆ ಸಹಾಯಕವಾಗುವುದೆಂದು ಅವನಿಗೆ ಮನದಟ್ಟಾಯಿತು.

ಮೆಂಡೆಲನಿಗೆ ಬಾಲ್ಯದಿಂದಲೂ ಗಿಡಗಳನ್ನು ಕಸಿಕಟ್ಟುವುದು ಮತ್ತು ವಿವಿಧ ಬಗೆಯ ಹಣ್ಣು ಮತ್ತು ಹೂಗಳನ್ನು ಬೆಳೆಸುವುದರಲ್ಲಿ ತರಪೇತಿಯಿತ್ತು. ಮೇಲಾಗಿ ರೈತಮನೆತನದಲ್ಲಿ

ಬೆಳೆದು ಬಂದವನು. ಎಷ್ಟಾದರೂ ಪ್ರಾಣಿಗಳಿಗಿಂತ ಸಸ್ಯಗಳ ಮೇಲೆಯೇ ಅವನಿಗೆ ವಾತ್ಸಲ್ಯ. ಆದುದರಿಂದಲೇ ಅವನು ಸೀಮೆ ಅಗಸೇ ಗಿಡ (Flax), ಬಟಾಣಿ (Peas), ತಿಂಗಳು ಹುರಳಿ (Beans), ಪ್ಲಮ್ (Plum), ಪೇರು ಹಣ್ಣಿನಗಿಡ (Pears), ಮುಸುಕಿನ ಜೋಳ (Corns), ಕುಂಬಳಕಾಯಿ ಮೊದಲಾದ ಗಿಡಗಳನ್ನು ತನ್ನ ಮಠದ ತೋಟದಲ್ಲಿ ಬೆಳೆಸಿ ಅವುಗಳ ವಿವಿಧ ಪ್ರಭೇದಗಳೊಡನೆ ಅಡ್ಡಹಾಯಿಸಿ ತಳಿಮಿಶ್ರಣ ಕಾರ್ಯದಲ್ಲಿ ವಿರಾಮ ವೇಳೆಯಲ್ಲಿ ನಿರತನಾಗಿರುತ್ತಿದ್ದನು.

ಬಟಾಣಿ ಗಿಡಗಳನ್ನು ಮೆಂಡೆಲನು ತನ್ನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳಿಗೆ ಆರಿಸಿಕೊಂಡದ್ದಕ್ಕೆ ಹಲವಾರು ಊಹಾಪೋಹಗಳಿವೆ. ಆಗಿನ ಕಾಲಕ್ಕೆ ಬ್ರೂಯಿನ್ ಪಟ್ಟಣದ ಸುತ್ತಮುತ್ತಲಿನ ಪ್ರದೇಶದಲ್ಲಿ ಬ್ರೂಕಸ್ (Brucus pisi) ಎಂಬ ಜಾತಿಯ ಜೀರುಂಡೆಯು (Beetle) ಬಟಾಣಿ ಫಸಲನ್ನು ಹಾಳುಮಾಡುತ್ತಿತ್ತು. ಈ ಹಾವಳಿಯನ್ನು ವಿವರಿಸಿ ವಿಯನ್ನಾ ನಗರದಲ್ಲಿದ್ದ ತನ್ನ ಮಿತ್ರನಿಗೊಂದು ಕಾಗದವನ್ನು ೧೮೫೪ರಲ್ಲಿ ಬರೆದನು. ಈ ಪ್ರಸಂಗವು ಮೆಂಡೆಲನಿಗೆ ಬಟಾಣಿ ಗಿಡಗಳ ಮೇಲೆ ಆಸಕ್ತಿಯನ್ನು ಹುಟ್ಟಿಸಿರಬೇಕು.

ಮೆಂಡೆಲನು ೧೮೫೬ರಲ್ಲಿ ಉಪಾಧ್ಯಾಯವೃತ್ತಿಯ ಅರ್ಹತಾ ಪತ್ರವನ್ನು ಪಡೆಯಲು ಕುಳಿತುಕೊಂಡ ಪರೀಕ್ಷೆಯಲ್ಲಿ, ಪರೀಕ್ಷ ಕರಿಗೂ ಮತ್ತು ಮೆಂಡೆಲನಿಗೂ ನಡೆದ ವಾದ ವಿವಾದಗಳು ಮೆಂಡೆಲನು ಸಸ್ಯಗಳಲ್ಲಿ ಕೃತಕವಾಗಿ ಅಡ್ಡಹಾಯಿಸುವ ಪ್ರಯೋಗಗಳನ್ನು ಪ್ರಾರಂಭಿಸಲು ಪ್ರಚೋದಕವಾದುವೆಂದು ಮಠದ ಪಾದ್ರಿಗಳಲ್ಲೊಬ್ಬರು ಅವನ ಬಗ್ಗೆ ಅಭಿಪ್ರಾಯ ಪಟ್ಟಿದ್ದಾರೆ. ಇದು ಸತ್ಯವೋ ಸುಳ್ಳೋ ಎಂಬುದಕ್ಕೆ ಸಾಕ್ಷ್ಯಾ

ಧಾರಗಳಿಲ್ಲ. ಅಂತೂ ಮೆಂಡೆಲನಿಗೆ ಬಾಲ್ಯದಿಂದಲೂ ಪ್ರಕೃತಿಯಲ್ಲಿ ಹೂವು, ಕಾಯಿ, ಹಣ್ಣು, ಎಲೆ, ಮರಗಳ ವರ್ಣ ಮತ್ತು ರಚನೆಗೆ ಪ್ರೇರಕಗಳಾವುವು ? ಅವುಗಳ ಸ್ವಭಾವವೇನು? ಸ್ವರೂಪವೇನು ? ಇವೇ ಮೊದಲಾದ ಸಮಸ್ಯೆಗಳು ಮನಸ್ಸಿನಲ್ಲಿಯೇ ಕುದಿಯುತ್ತಿದ್ದುವು. ಅಂತೂ ಅಲಂಕಾರಕ್ಕಾಗಿ ಬೆಳೆಸುವ ಸಸ್ಯಗಳಲ್ಲಿ ಕೃತಕವಾಗಿ ಪರಾಗಾರ್ಪಣೆ ನಡೆಸಿ ಹೊಸ ಹೊಸ ಬಣ್ಣಮಿಶ್ರದ ಹೂವುಗಳನ್ನು ಬಿಡುವ ತಳಿಗಳನ್ನು ಪಡೆದ ಫಲಿತಾಂಶಗಳು ತನಗೆ ಮಾರ್ಗದರ್ಶಕವಾದುವೆಂದು ಮೆಂಡೆಲನೇ ತನ್ನ ಬಟಾಣಿ ಗಿಡಗಳ ಮೇಲೆ ನಡೆಸಿದ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳ ಸಂಬಂಧವಾಗಿ ಪ್ರಕಟಿಸಿರುವ ಮಹಾಪ್ರಬಂಧದಲ್ಲಿ ನಮೂದಿಸಿಕೊಂಡಿದ್ದಾನೆ. ಅಂದರೆ ಅದರ ಪ್ರಕಾರ ಮೆಂಡೆಲನು ಸ್ವಯಂಪ್ರೇರಿತನಾಗಿಯೇ ಬಟಾಣಿಗಿಡದಲ್ಲಿ ತಳಿ ಮಿಶ್ರಣ ಪ್ರಯೋಗಗಳನ್ನು ಪ್ರಾರಂಭಿಸಿದನೆಂದು ಊಹಿಸಬಹುದು.

ಒಂದು ಶತಮಾನದ ಹಿಂದಿನಿಂದಲೂ ಸಸ್ಯಗಳಲ್ಲಿ ತಳಿಮಿಶ್ರಣ ಪ್ರಯೋಗಗಳ ಬಗ್ಗೆ ಹಲವಾರು ವರದಿಗಳು ಬಂದಿದ್ದುವು. ಸಸ್ಯಗಳಲ್ಲಿ ಲೈಂಗಿಕ ನಡವಳಿಕೆಯನ್ನರಿತು ತಳಿಮಿಶ್ರಣ ಪ್ರಯೋಗ ತಂತ್ರಗಳನ್ನು ಆಚರಣೆಗೆ ತಂದವರಲ್ಲಿ ಜರ್ಮನಿಯ ಜೋಸೆಫ್ ಗೋಟ್‌ಲೀಪ್ ಕೊಯಲ್‌ರಾಯುಟರ್‌ನು (Joseph Gottlieb Koelreuter ೧೭೩೩–೧೮೦೬) ಮೊಟ್ಟಮೊದಲಿಗನು. ಇವನ ಹೆಜ್ಜೆಯನ್ನನುಸರಿಸಿ ಗೇರ್‌ಟ್ನರ್ (Gärtner), ಹೆರ್ಬರ್ಟ್ (Herbert), ಲೆಕೋಕ್ (Lecoq) ಮತ್ತು ವಿಚೂರ (Wichura) ರವರೇ ಮೊದಲಾದವರು ಈ ಕ್ಷೇತ್ರದ ಪ್ರಗತಿ ಪಥದಲ್ಲಿ ಸ್ವಲ್ಪಮಟ್ಟಿಗೆ ಸಾಗಿದ್ದರು; ಅಲ್ಲದೆ

ವಿವಿಧ ರೀತಿಯ ಹಣ್ಣು ಬಿಡುವ ಮತ್ತು ಹೂಗಳನ್ನು ಬಿಡುವ ಹೊಸ ಹೊಸ ಮಿಶ್ರತಳಿಗಳನ್ನು ಪಡೆದಿದ್ದರು; ಸೃಷ್ಟಿಸಿದ್ದರು. ಇವರೆಲ್ಲರ ತಳಿಮಿಶ್ರಣ ಪ್ರಯೋಗಗಳಿಂದ ಪಡೆದ ಫಲಿತಾಂಶ ಗಳು ಮೆಂಡೆಲನ ಫಲಿತಾಂಶಗಳನ್ನೇ ಹೋಲುತ್ತಿದ್ದುವು. ಆದರೆ ಅವರು ಆನುವಂಶೀಯತೆಯ ಬಗ್ಗೆ ಕೊಟ್ಟ ವಿವರಗಳು ತುಂಬಾ ಅತೃಪ್ತಿಕರವಾಗಿದ್ದುವು; ಸತ್ಯಾಂಶಕ್ಕೆ ದೂರವಾಗಿ ದ್ದುವು.

ಮೆಂಡೆಲನ ಕಾಲಕ್ಕೆ ಹಿಂದಿದ್ದ ಆನುವಂಶೀಯತೆಯ ಅಧ್ಯಯನಕಾರರೆಲ್ಲರೂ ಪೀಳಿಗೆಗಳಲ್ಲಿ ಹಲವಾರು ಗುಣಲಕ್ಷಣ ಗಳನ್ನು ಏಕಕಾಲದಲ್ಲಿಯೇ ಒಂದೇ ದೃಷ್ಟಿಯಿಂದ ನೋಡಿ ಅಧ್ಯಯನಮಾಡಿದ್ದರು. ಆದಕಾರಣ ಬಗೆಬಗೆಯ ರೀತಿಗಳಲ್ಲಿ ಕ್ಲಿಷ್ಟವಾಗಿ ಹೆಣೆದುಕೊಂಡಿರುವ ಜೀವಿಯ ಗುಣವಿಶೇಷಗಳ ವರ್ತನೆಗಳನ್ನು ಪೀಳಿಗೆಗಳಲ್ಲಿ ವಿಶ್ಲೇಷಿಸುವುದು ಕಷ್ಟಮಯ ವಾಗಿತ್ತು. ಅಲ್ಲದೆ ಸಂತಾನದ ಎಲ್ಲಾ ವ್ಯಕ್ತಿಗಳನ್ನು ವೈಯಕ್ತಿಕವಾಗಿ ಪರೀಕ್ಷಿಸಿರಲಿಲ್ಲ. ಕೇವಲ ಒಂದು ಬಗೆಯ ವಿಹಂಗಮ ದೃಷ್ಟಿಯಿಂದ ಅವಲೋಕನ ಮಾಡಿದ್ದರು. ಮೇಲಾಗಿ ಪ್ರತಿ ಪೀಳಿಗೆಯಲ್ಲಿಯೂ ಸಂತಾನದ ವ್ಯಕ್ತಿಗಳನ್ನು ಎಣಿಕೆಮಾಡಿ ಯಾವ ಬಗೆಯ ಅಂಕಿಅಂಶಗಳನ್ನೂ (Statis-tics) ಸಂಗ್ರಹಿಸಲಿಲ್ಲ ಮತ್ತು ಅದನ್ನು ವಿಶ್ಲೇಷಿಸಿ ಅಧ್ಯಯನ ಮಾಡಿರಲಿಲ್ಲ.

ಮೆಂಡೆಲನಾದರೋ ಆನುವಂಶೀಯತೆಯ ಅಧ್ಯಯನದಲ್ಲಿ ಹೊಸದಾದ ದಿಟ್ಟ ದಾರಿಯನ್ನೇ ಮೆಟ್ಟಿದನು. ಅವನಿಗೆ ತನ್ನ ಪ್ರಯೋಗಪರೀಕ್ಷೆಗಳಲ್ಲಿ ಒಂದು ದೃಢವಾದ ಉದ್ದೇಶವಿತ್ತು, ಒಂದು ನಿರ್ದಿಷ್ಟ ಗುರಿ ಮತ್ತು ಧ್ಯೇಯವಿತ್ತು. ಧ್ಯೇಯವನ್ನು

ಸಾಧಿಸಲು ಸೂಕ್ತವಾದ ಮತ್ತು ಸಮರ್ಪಕವಾದ ಪ್ರಯೋಗಗಳನ್ನು ನಡೆಸಿ ಪೀಳಿಗೆಯ ಪ್ರತಿ ವ್ಯಕ್ತಿಯನ್ನೂ ಕೂಲಂಕಷವಾಗಿ ಪರೀಕ್ಷಿಸುತ್ತಿದ್ದನು. ಮೆಂಡೆಲನು ನಿಜವಾಗಿಯೂ ತನ್ನ ಪ್ರಯೋಗ ಪರೀಕ್ಷೆಗಳಲ್ಲಿ ಪ್ರತಿಭಾನ್ವಿತ ಫಲಿತಾಂಶಗಳ ವಿಶ್ಲೇಷಣೆಯಲ್ಲಿ ನಿಶಿತಮತಿಯುಳ್ಳವನಾಗಿದ್ದು, ಒಂದೊಂದು ಜೊತೆ ವಿಭಿನ್ನ ಗುಣಲಕ್ಷಣಗಳನ್ನು ಮಾತ್ರ ಗಮನದಲ್ಲಿಟ್ಟು, ಅವುಗಳು ಒಂದು ಪೀಳಿಗೆಯಿಂದ ಮುಂದಿನ ಪೀಳಿಗೆಗಳಿಗೆ ಯಾವ ರೀತಿಯಲ್ಲಿ, ಯಾವ ನೀತಿಯನ್ನನುಸರಿಸಿ ಬರುತ್ತವೆ ಮತ್ತು ಹೇಗೆ ನಿಯಮಬದ್ಧವಾಗಿ ಹಂಚಿಕೆಯಾಗುತ್ತವೆಂಬುದನ್ನು ಕೂಲಂಕಷವಾಗಿ ಅನುಸರಿಸಿ ಅಧ್ಯಯನ ಮಾಡುತ್ತಿದ್ದನು. ಪ್ರತಿ ಪೀಳಿಗೆಯಲ್ಲಿಯೂ ಪ್ರತಿಯೊಂದು ಗಿಡ, ಹೂವು, ಕಾಯಿ, ಬೀಜಗಳ ಗುಣಲಕ್ಷಣಗಳನ್ನು ವ್ಯಕ್ತಿನಿಷ್ಠವಾಗಿ, ವಿವರವಾಗಿ ಬಲು ಎಚ್ಚರಿಕೆಯಿಂದ ಪರೀಕ್ಷಿಸುತ್ತಿದ್ದನು. ಅನಂತರ ಅವುಗಳನ್ನು ವರ್ಗೀಕರಣಮಾಡಿ, ಅಂಕಿಅಂಶಗಳನ್ನು ಸಂಗ್ರಹಿಸಿ, ಗಣಿತಶಾಸ್ತ್ರದ ಸೂತ್ರಗಳಿಗೆ ಹೋಲಿಸುತ್ತಿದ್ದನು. ಜೀವವಿಜ್ಞಾನದ ಅಧ್ಯಯನಕ್ಕೆ ಗಣಿತಶಾಸ್ತ್ರದ ನೆರವು ಪಡೆದು ಸಮರ್ಪಕವಾದ ಸಾಧನೆಯನ್ನು ಸಂಪಾದಿಸಿದ ಜೀವಶಾಸ್ತ್ರಜ್ಞರಲ್ಲಿ ಮೆಂಡೆಲನೇ ಮೊದಲಿಗ. ಪಡೆದ ಅಂಕಿಅಂಶಗಳನ್ನು ಅಧ್ಯಯನಮಾಡಿ ಅದರಿಂದ ಸಾಧ್ಯವಾದ ಅನುಮೇಯಗಳನ್ನು (Hypothesis) ನಿರೂಪಿಸುತ್ತಿದ್ದನು. ಹೀಗಾಗಿ ವಿಭಿನ್ನ ಗುಣಲಕ್ಷಣಗಳುಳ್ಳ ಯಾವ ಗಿಡಗಳನ್ನು ಯಾವುದರೊಡನೆ ಅಡ್ಡಹಾಯಿಸಿದರೆ ಯಾವ ಯಾವ ಬಗೆಯ ಗಿಡಗಳನ್ನು ಪಡೆಯಬಹುದೆಂದು ಭವಿಷ್ಯ ನುಡಿಯುತ್ತಿದ್ದನು. ತನ್ನ ಕಲ್ಪನಾತ್ಮಕ ವಾದಗಳನ್ನು ಸೂಕ್ಷ್ಮ ಪ್ರಯೋಗ

ಪರೀಕ್ಷೆಗಳಿಂದ ತಾಳೆ ನೋಡುತ್ತಿದ್ದನು. ಪ್ರತಿಯೊಂದರಲ್ಲೂ ಸುಮಾರು ಒಂದೇ ಬಗೆಯ ಫಲಿತಾಂಶಗಳು ಹೊರಹೊಮ್ಮುತ್ತಿದ್ದುವು. ಇದನ್ನು ಕಂಡ ಮೆಂಡೆಲನಿಗೆ ಉತ್ಸಾಹ ಉಕ್ಕಿ ಆಶ್ಚರ್ಯಚಕಿತನಾದುದೂ ಉಂಟು.

ಎಷ್ಟೇ ಆದರೂ ಮೆಂಡೆಲನು ಮೊದಲಿನಿಂದ ಕೊನೆಯವರೆಗೂ ಪ್ರಕೃತಿಯು ಕೈಹಿಡಿದು ನಡೆಸಿದಂತೆ ಮುಂದೆ ಮುಂದೆ ಹೆಜ್ಜೆಯಿಟ್ಟನು. ವ್ಯಕ್ತಿಯ ಗುಣಲಕ್ಷಣಗಳಿಗೆ ಕಾರಣಗಳೇನು? ಅವುಗಳಿಗೆ ಪ್ರೇರಕವಾದ ಘಟಕಗಳಿವೆಯೇ? ಇದ್ದರೆ ತೆರೆಯಮರೆಯಲ್ಲಿರುವ ಆ ವಸ್ತುಗಳ ಸ್ವರೂಪವೇನು? ಅವುಗಳ ವರ್ತನೆ ಏನು? ಒಂದು ನಿರ್ದಿಷ್ಟವಾದ ಗುಣವಿಶೇಷಕ್ಕೆ ಒಂದು ಘಟಕವು ಕಾರಣವಾದರೆ ಹಲವಾರು ಗುಣಲಕ್ಷಣಗಳಿಂದ ರೂಪಿತವಾದ ವ್ಯಕ್ತಿಯಲ್ಲಿ ಹಲವಾರು ಘಟಕಗಳಿರಬೇಕಲ್ಲವೆ? ಒಂದೇ ವ್ಯಕ್ತಿಯಲ್ಲಿ ಬಹುತೇಕವಾಗಿರುವ ಘಟಕಗಳಿಗೆ ಪರಸ್ಪರ ಸಂಬಂಧವೇನು? ಅವುಗಳು ತಮ್ಮತಮ್ಮಲ್ಲಿ ಪ್ರಭಾವವನ್ನು ಬೀರುತ್ತವೆಯೇ? — ಇವೇ ಮೊದಲಾದ ಹಲವಾರು ಪ್ರಶ್ನೆಗಳಿಗೆ ತೃಪ್ತಿಕರವಾಗಿ ಉತ್ತರಿಸಲು ಪ್ರಯತ್ನಪಟ್ಟನು. ಪರಿಪಕ್ವವಾದ ದೃಷ್ಟಿಯಿಂದ ಆನುವಂಶೀಯತೆಯ ಧರ್ಮವನ್ನು ಕೂಲಂಕಷವಾಗಿ ಮನನಮಾಡಿದನು. ಪ್ರತಿ ಪೀಳಿಗೆಯಲ್ಲಿಯೂ ಶ್ರಮವಹಿಸಿ ಬಹಳ ಎಚ್ಚರಿಕೆಯಿಂದ ಸಂಗ್ರಹಿಸಿದ ನಿರ್ದಿಷ್ಟವಾದ ಅಂಕಿಅಂಶಗಳನ್ನು ವಿಶೇಷ ರೀತಿಯಲ್ಲಿ ವಿಶ್ಲೇಷಣೆ ಮಾಡಿದನು. ನಿತ್ಯಸತ್ಯದ ಸತ್ಯಾನ್ವೇಷಣೆಯಲ್ಲಿ ಜಯಗಳಿಸಿದನು. ಅನುವಂಶೀಯತೆಯ ಮೂಲಭೂತವಾದ ನಿಯಮಗಳನ್ನು ನಿರೂಪಿಸಿ ಜೀವನ ಸಾರ್ಥಕಮಾಡಿಕೊಂಡು ಅಮರಕೀರ್ತಿಯನ್ನು ಗಳಿಸಿದನು.

ಮೆಂಡೆಲನು ತನ್ನ ಪ್ರಯೋಗಾರ್ಥವಾಗಿ ಆರಿಸಿಕೊಂಡ ಬಟಾಣಿಯು (Pisum sativum) ಕೇವಲ ಅಕಸ್ಮಾತ್ತಾಗಿ ದೊರತುದಲ್ಲ. ಇದು ತಳಿಮಿಶ್ರಣ ಪ್ರಯೋಗಪರೀಕ್ಷೆಗಳಿಗೆ ಯೋಗ್ಯವಸ್ತುವೆಂಬುದು ಅವನಿಗೆ ಮೊದಲೇ ತಿಳಿದಿತ್ತು. ಏಕೆಂದರೆ ಬಟಾಣಿ ಗಿಡದಲ್ಲಿ ಸ್ಪಷ್ಟವಾಗಿ ಕಂಡುಬರುವ ಹಲವಾರು ಬಗೆಯ ವೈಶಿಷ್ಟ್ಯ ಗುಣವಿಶೇಷಗಳು ಅವನ ಮನಸ್ಸನ್ನು ಸೆಳೆದಿದ್ದುವು. ಅವುಗಳಾವುವೆಂದರೆ : ೧) ಶುದ್ಧತಳಿಯ ಬಗೆಬಗೆಯ ಬಟಾಣಿಗಳನ್ನು ಸುಲಭವಾಗಿ ಪಡೆಯಬಹುದಾಗಿತ್ತು. ೨) ಪರಕೀಯ ಪರಾಗವು ಪುಷ್ಪದಲ್ಲಿ ಪ್ರವೇಶಿಸದಂತೆ ಪುಷ್ಪದಳಗಳು ಸಂತಾನೋತ್ಪತ್ತಿಯ ಅಂಗಗಳನ್ನು ಸುರಕ್ಷಿತವಾಗಿ ಕಾಪಾಡುವ ಪುಷ್ಪರಚನೆ. ೩) ವಿಭಿನ್ನ ಲಕ್ಷಣದ ಗಿಡಗಳನ್ನು ಪರಸ್ಪರ ಅಡ್ಡ ಹಾಯಿಸಿ ಪಡೆದ ಮಿಶ್ರತಳಿ ಬೀಜಗಳು ಮೊಳೆತು, ಬೆಳೆದು, ಫಲಬಿಡುವ ಸಾಮರ್ಥ್ಯವನ್ನುಳ್ಳವು. ೪) ಇವುಗಳು ತೋಟಗಳಲ್ಲಾಗಲೀ ಅಥವಾ ಕುಂಡಗಳಲ್ಲಾಗಲೀ ಸುಲಭ ಖರ್ಚಿನಿಂದ ಬೆಳೆಸತಕ್ಕವು.

ಮೆಂಡೆಲನು ಬಟಾಣಿಯನ್ನು ಆದರ್ಶವಸ್ತುವೆಂದು ಪರಿಗಣಿಸಿ ತನ್ನ ತಳಿಮಿಶ್ರಣ ಪ್ರಯೋಗಪರೀಕ್ಷೆಗಳಿಗೆ ಆರಿಸಿಕೊಂಡಮೇಲೆ ಆ ಪ್ರಾಂತದಲ್ಲಿ ದೊರಕುತ್ತಿದ್ದ ಎಲ್ಲಾ ಬಗೆಯ ಬಟಾಣಿ ಬೀಜಗಳನ್ನು—ಸುಮಾರು ೩೪ ಪ್ರಬೇಧ (Variety) ಗಳನ್ನು—ಸಂಗ್ರಹಿಸಿದನು. ಎರಡು ವರ್ಷಗಳಕಾಲ ಆ ಬೀಜಗಳನ್ನು ಮಠದ ತೋಟದಲ್ಲಿ ನೆಟ್ಟು, ಬೆಳೆಸಿ ಅವುಗಳಿಂದ ಶುದ್ಧ ತಳಿಯ ೨೨ ಪ್ರಪ್ರಭೇದಗಳನ್ನು ಆಯ್ದುಕೊಂಡನು. ಅನಂತರ ಅವುಗಳನ್ನು ವರ್ಗೀಕರಣಮಾಡಿ ಈ ಕೆಳಕಂಡ ಏಳು ಜೊತೆ ಭಿನ್ನಭಿನ್ನ ಲಕ್ಷಣಗಳಿರುವಂತೆ ವಿಂಗಡಿಸಿದನು.

೧. ಬೀಜದ ಆಕಾರ (Shape): ಗೋಲಾಕಾರದ ಮತ್ತು ಸುಕ್ಕು ನಿರಿಗೆಯ ಬೀಜಗಳು.

೨. ಬಟಾಣಿ ಬೇಳೆಯ ಬಣ್ಣ: ಹಳದಿ ಮತ್ತು ಹಸುರು ಬಣ್ಣದ ಬೇಳೆಗಳು.

೩. ಬಟಾಣಿ ಬೀಜದ ಪೊರೆಯ ಬಣ್ಣ: ಹಳದಿ ಬಣ್ಣದ ಮತ್ತು ಹಸುರು ಬಣ್ಣದ ಬೀಜದ ಪೊರೆ.

೪. ಬಟಾಣಿಕಾಯಿಯ ರೂಪು: ಊದಿದಕಾಯಿ (Inflated) ಮತ್ತು ಕಾಳುಗಳ ಮಧ್ಯೆ ಸಂಕುಚಿತಗೊಂಡ ಕಾಯಿ (Constructed between the peas) ಅಥವಾ ಕೋಡುಗಳು.

೫. ಬಲಿಯುದ ಕಾಯಿಯ ಬಣ್ಣ: ಹಸುರು ಕಾಯಿಗಳು ಮತ್ತು ಹಳದಿ ಬಣ್ಣದ ಕಾಯಿ ಅಥವಾ ಕೋಡುಗಳು.

೬. ಗಿಡದಮೇಲೆ ಹೂವಿನ ಸ್ಥಾನ: ಪರ್ವಸ್ಥಿತಿಯಲ್ಲಿ(Axial) ಮತ್ತು ತುಟ್ಟ ತುದಿಯಲ್ಲಿ ಮಾತ್ರ ಹೂವುಗಳನ್ನು ಹೊಂದಿರುವ ಸ್ಥಿತಿ (Terminal).

೭. ಗಿಡದ ಎತ್ತರ: ಎತ್ತರವಾಗಿ ಬೆಳೆಯತಕ್ಕವು ಮತ್ತು ಗಿಡ್ಡಾಗಿ ಬೆಳೆಯತಕ್ಕವು.

ಮೆಂಡೆಲನು ಕೈಗೊಂಡ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು ಕೆಲವು ಹಂತಗಳಲ್ಲಿ ನಿರೂಪಿಸಬಹುದು. ಮೊಟ್ಟ ಮೊದಲು ಒಂದು ಜೊತೆ ಪರಸ್ಪರ ವಿರುದ್ಧ ಗುಣಲಕ್ಷಣಗಳನ್ನು ಪ್ರದರ್ಶಿಸುವ ಬೀಜಗಳನ್ನು ಆರಿಸಿಕೊಂಡು ಎರಡು ಮೂರು ಪೀಳಿಗೆಗಳವರೆಗೂ ವಸಂತಋತುವಿನಲ್ಲಿ ಬೆಳೆಸಿ, ಲಕ್ಷಣದಲ್ಲಿ

ಸ್ಥಿರತೆಯನ್ನು ಕಂಡುಹಿಡಿದನು. ಸುಮಾರು ೨-೨ ೧/೪ ಮೀಟರು ಎತ್ತರವಾಗಿ ಬೆಳೆವ ಬಟಾಣಿ ಗಿಡಗಳಿಂದ ಪಡೆದ ಬೀಜಗಳನ್ನು ಬಿತ್ತಲು ಅವು ಅದೇ ಎತ್ತರದ ಗಿಡಗಳಂತೆಯೇ ಬೆಳೆದುವು. ಗಿಡ್ಡಾಗಿ ಬೆಳೆದ ಗಿಡಗಳಿಂದ ಪಡೆದ ಬೀಜಗಳನ್ನು ಬಿತ್ತಿದಾಗ ಅವು ಗಿಡ್ಡಾಗಿಯೇ ಬೆಳೆದುವು. ಹೀಗೆ ಬೆಳೆದ ಗಿಡಗಳನ್ನು ಶುದ್ಧ ಸಂತಾನ (Pure line) ಎಂದು ಕರೆದನು. ಇದು ಅವನ ಪ್ರಯೋಗದ ಮೊದಲ ಹಂತ.

ಹೂವುಗಳಲ್ಲಿ ಕೃತಕವಾಗಿ ಪರಕೀಯ ಪರಾಗಾರ್ಪಣೆ (Cross-pollination) ಮಾಡಿದ್ದು ಎರಡನೆಯ ಹಂತ. ಮೊದಲು ಎತ್ತರವಾಗಿ ಮತ್ತು ಗಿಡ್ಡಾಗಿ ಬೆಳೆವ ಎರಡು ಶುದ್ಧ ಸಂತಾನದ ಬಟಾಣಿ ಗಿಡಗಳನ್ನು ಬೆಳೆಸುವುದು, ಹೂವು ಬಲಿತು ಅರಳುವುದಕ್ಕೆ ಮುನ್ನವೇ ಪುಷ್ಪದಳಗಳನ್ನು ಜಾಗರೂಕತೆಯಿಂದ ಬಿಚ್ಚಿ, ಬಲಿಯದ ಕೇಸರಗಳನ್ನು ಪುಟ್ಟ ಚಿಮುಟದಿಂದ ಕೀಳುವುದು. ಅನಂತರ ವಿಭಿನ್ನ ಗುಣದ ಗಿಡದ ಹೂವಿನ ಪರಾಗವನ್ನು (Pollen) ಒಂಟೆ ಕೂದಲು ಕುಂಚ (Camel-hair brush)ದ ಸಹಾಯದಿಂದ ತಂದು ಆ ಹೂವಿನ ಶಲಾಕಾಗ್ರಕ್ಕೆ ಸವರುವುದು. ಆಮೇಲೆ ಆ ಹೂವನ್ನು ಕಾಗದದ ಅಥವಾ ಬಟ್ಟೆಯ ಚೀಲದಿಂದ ಮುಚ್ಚಿ ಪರಕೀಯ ಪರಾಗವು ಬಾರದಂತೆ ರಕ್ಷಿಸುವುದು. ಈ ಮೇಲಿನ ಪ್ರಯೋಗದಲ್ಲಿ ಎತ್ತರವಾಗಿ ಬೆಳೆದ ಗಿಡದ ಹೂವಿನ ಶಲಾಕಾಗ್ರಕ್ಕೆ ಗಿಡ್ಡಾಗಿ ಬೆಳೆದ ಗಿಡದ ಹೂವಿನ ಪರಾಗವನ್ನು ಹಚ್ಚುವುದು; ಅಥವಾ ಗಿಡ್ಡ ಗಿಡದ ಹೂವಿನ ಶಲಾಕಾಗ್ರಕ್ಕೆ ಎತ್ತರದ ಗಿಡದ ಹೂವಿನ ಪರಾಗವನ್ನು ಹಚ್ಚುವುದು. ಈ ಬಗೆಯ ಕೃತಕ ಪರಕೀಯ ಪರಾಗರ್ಪಣೆಯಿಂದ ಪುಷ್ಪದ ಅಂಡಕಗಳು

(Ovules) ಗರ್ಭಾಂಕುರಗೊಂಡು (Fertilize) ಬೀಜಗಳಾಗುತ್ತವೆ. ಪ್ರಯೋಗ ಪರೀಕ್ಷೆಗಳಿಗೆ ಹೀಗೆ ಆರಿಸಿಕೊಂಡ ಎತ್ತರ ಮತ್ತು ಗಿಡ್ಡ ಗಿಡಗಳನ್ನು ತಂದೆತಾಯಿಯ ಪೀಳಿಗೆಯೆಂದು (Parental generation) ಸಾಂಕೇತಿಕವಾಗಿ (P) ಎಂದು ಕರೆದನು.

ಹೀಗೆ ಅಡ್ಡ ಹಾಯಿಸಿ ಪಡೆದ ಬೀಜಗಳನ್ನು ಬಿತ್ತಿ ಫಸಲನ್ನು ಪಡೆದು ಅಧ್ಯಯನಮಾಡಿದ್ದು ಮೂರನೆಯ ಹಂತ. ತಂದೆತಾಯಿ ಪೀಳಿಗೆಯಿಂದ ಉತ್ಪನ್ನವಾದ ಬೀಜಗಳನ್ನು ಬಿತ್ತಲು ಗಿಡಗಳು ಎತ್ತರವಾಗಿ ಬೆಳೆವ ತಂದೆ ಅಥವಾ ತಾಯಿಯ ಗಿಡಗಳಲ್ಲೊಂದನ್ನು ಮಾತ್ರ ಹೋಲುವಂತೆ ಎತ್ತರವಾಗಿ ಬೆಳೆದುವು. ಯಾವ ಗಿಡವೂ ಗಿಡ್ಡಾಗಿ ಬೆಳೆಯಲಿಲ್ಲ; ಅಥವಾ ಆ ಗಿಡಗಳು ಮಧ್ಯವರ್ತಿ ಎತ್ತರದ ಗಿಡಗಳಾಗಿಯೂ ಇರಲಿಲ್ಲ. ಗಿಡ್ಡಾಗಿ ಬೆಳೆವ ಗಿಡಗಳು ಮಾಯವಾಗಲು ಕಾರಣವೇನು? ಹೀಗೆ ಬೆಳೆದ ಗಿಡಗಳ ಸಂತಾನವನ್ನು ಮೊದಲನೆಯ ತಳಿಪೀಳಿಗೆ (First filial generation ) ಸಾಂಕೇತಿಕವಾಗಿ ($F_1$) ಎಂದು ಕರೆದನು. ಈ ಗಿಡದ ಹೂಗಳಲ್ಲಿ ಸ್ವಕೀಯ ಪರಾಗಾರ್ಪಣೆಯಾಗಿ (Self-fertilize) ಅಂದರೆ ಅಂತರ್ ತಳೀಕರಣದಿಂದ ಅಂಡಕಗಳು ಗರ್ಭಾಂಕುರತೆಗೊಂಡು ಬೀಜೋತ್ಪನ್ನವಾದುವು.

ಮೆಂಡೆಲನು ತನ್ನ ಈ ಪ್ರಯೋಗದಿಂದ ಅಂದರೆ ಮೊದಲನೆಯ ತಳಿಪೀಳಿಗೆಯಿಂದ ಎಲ್ಲಾ ಬೀಜಗಳನ್ನು ಸಂಗ್ರಹಿಸಿದನು. ಅವು ನಿಖರವಾಗಿ ೧೦೬೪ ಬೀಜಗಳಾಗಿದ್ದುವು. ಇವೆಲ್ಲ ಬೀಜಗಳನ್ನು ಬಿತ್ತಿ ಗಿಡಗಳ ಎತ್ತರವನ್ನು ಪರೀಕ್ಷಿಸಿದ್ದು ನಾಲ್ಕನೆಯ ಹಂತ. ಹೀಗೆ ಬೆಳೆದ ಗಿಡಗಳನ್ನು ಎರಡನೆಯ ತಳಿಪೀಳಿಗೆ ($F_2$) ಎಂದು ಹೆಸರಿಟ್ಟನು. ಈ ಗಿಡಗಳಲ್ಲಿ ಹಲವಾರು ಗಿಡಗಳು

ಎತ್ತರವಾಗಿಯೂ, ಉಳಿದವು ಗಿಡ್ಡಾಗಿಯೂ ಬೆಳೆದಿದ್ದುವು. ಮೊದಲನೆಯ ತಳಿಪೀಳಿಗೆಯಲ್ಲಿ ಕಣ್ಮರೆಯಾಗಿದ್ದ ಗಿಡ್ಡ ಗಿಡಗಳು ಮತ್ತೆ ಕಾಣಿಸಿಕೊಂಡುವು! ಅವುಗಳ ಎತ್ತರ ತಂದೆ ತಾಯಿ ಪೀಳಿಗೆಯ ಗಿಡಗಳ ಎತ್ತರದಷ್ಟೇ!! ಎಲ್ಲಾ ಗಿಡಗಳನ್ನೂ ಎಣಿಸಿದನು. ೭೮೭ ಗಿಡಗಳು ಎತ್ತರವಾಗಿದ್ದುವು; ಉಳಿದ ೨೭೭ ಗಿಡಗಳು ಗಿಡ್ಡಾಗಿ ಬೆಳೆದಿದ್ದುವು. ಇವುಗಳ ಅಂದಾಜು ಪ್ರಮಾಣ ೩:೧. ಹೀಗೆ ಎರಡು ಬಗೆಯ ಗಿಡಗಳನ್ನು ಉತ್ಪತ್ತಿ ಮಾಡಿದ ಮೊದಲನೆಯ ತಳಿಪೀಳಿಗೆಯನ್ನು ($F_1$) ಸಂಕರ ಅಥವಾ ಮಿಶ್ರತಳಿ (Hybrid) ಸಂತಾನವೆಂದು ಕರೆದನು.

ಈ ಧಾಟಿಯನ್ನೇ ಅನುಸರಿಸಿ ಉಳಿದ ಆರು ಜೊತೆ ವಿಭಿನ್ನ ಗುಣಲಕ್ಷಣದ ಗಿಡಗಳನ್ನು ಬೆಳೆಸಿ ತಳಿಮಿಶ್ರಣ ಪ್ರಯೋಗ ಗಳನ್ನು ಮಾಡಿದನು. ಪ್ರತಿಯೊಂದರ ಫಲಿತಾಂಶದಲ್ಲಿಯೂ ಒಂದೇ ಬಗೆಯ ಪ್ರಮಾಣ ೩:೧!!

ಮೆಂಡೆಲನು ತನ್ನ ಪ್ರಯೋಗ ಪರೀಕ್ಷೆಗಳನ್ನು ಇಲ್ಲಿಗೇ ನಿಲ್ಲಿಸಬಹುದಾಗಿತ್ತು. ಆದರೆ ಮುಂದಿನ ಮೂರನೆಯ ತಳಿ ಪೀಳಿಗೆಯಲ್ಲಿ ($F_3$) ಯಾವ ರೀತಿಯಲ್ಲಿ ಗಿಡಗಳು ಬೆಳೆಯುತ್ತ ವೆಂಬ ಅನುಮೇಯವನ್ನು (Hypothesis) ಕುರಿತು ಭವಿಷ್ಯ ನುಡಿದನು. ಎರಡನೆಯ ತಳಿಪೀಳಿಗೆಯ ಗಿಡ್ಡಾಗಿ ಬೆಳೆವ ಗಿಡಗಳು ಶುದ್ಧ ಸಂತಾನ (Pure line)ವೆಂದೂ ಅವುಗಳಿಂದ ಉತ್ಪತ್ತಿಯಾದ ಬೀಜಗಳು ವಂಶಾನುಗತವಾಗಿ ಗಿಡ್ಡಾಗಿಯೇ ಬೆಳೆವ ಗಿಡಗಳಿಗೆ ಕಾರಣವಾಗಿರುತ್ತವೆಂದೂ ಭಾವಿಸಿದನು. ಅಲ್ಲದೆ ಎತ್ತರವಾಗಿ ಬೆಳೆವ ಗಿಡಗಳ ಪೈಕಿ ೧/೩ ಭಾಗ ಶುದ್ಧ ಸಂತಾನವೆಂದೂ ಮತ್ತು ಉಳಿದ ೨/೩ ಭಾಗ ಮಿಶ್ರಸಂತಾನ ವಾಗಿರುತ್ತವೆಂದೂ ನಂಬಿದ್ದನು.

ಎರಡನೆಯ ತಳಿಪೀಳಿಗೆಯಿಂದ ಉತ್ಪತ್ತಿಯಾದ ಎಲ್ಲಾ ಬೀಜಗಳನ್ನು ಬಹಳ ಎಚ್ಚರಿಕೆಯಿಂದ ಸಂಗ್ರಹಿಸಿ ವಸಂತ ಋತುವು ಮತ್ತೆ ಬಂದಮೇಲೆ ಬಿತ್ತಿ ಮೂರನೆಯ ತಳಿಪೀಳಿಗೆಯನ್ನು ($F_3$) ಬೆಳೆಸಿದನು. ಗಿಡಗಳೆಲ್ಲವೂ ಬೆಳೆದು ಪ್ರೌಢಾವಸ್ಥೆಗೆ ಬಂದಾಗ ಮೆಂಡೆಲನ ಭವಿಷ್ಯ ಹುಸಿಯಾಗಲಿಲ್ಲ. ಅವನ ನಿರೀಕ್ಷೆ ನಿರಾಶಾದಾಯಕವಾಗಿರಲಿಲ್ಲ. ಅವನ ಅನುಮೇಯವನ್ನು ದೃಢೀಕರಿಸುವ ಫಲಿತಾಂಶಗಳು ದೊರಕಿದುವು. ನಿಯತ ಪ್ರಮಾಣದಲ್ಲಿ ಗಿಡಗಳು ಎತ್ತರವಾಗಿಯೂ ಮತ್ತು ಗಿಡ್ಡಾಗಿಯೂ ಬೆಳೆದುವು.

ಮೆಂಡೆಲನು ಇದೇ ರೀತಿಯಲ್ಲಿ ಉಳಿದ ಆರುಜೊತೆ ವಿಭಿನ್ನ ಗುಣಲಕ್ಷಣಗಳನ್ನುಳ್ಳ ಗಿಡಗಳನ್ನು ಮೂರುನಾಲ್ಕು ಪೀಳಿಗೆಗಳವರೆಗೂ ಬೆಳೆಸಿ, ಅಂಕಿಅಂಶಗಳನ್ನು ಸಂಗ್ರಹಿಸಿ, ವಿಶ್ಲೇಷಣೆ ಮಾಡಿದನು. ತನ್ನ ಅನುಮೇಯಗಳನ್ನು ಒರೆಹಚ್ಚಿ ನೋಡಿದನು. ಪ್ರತಿಯೊಂದರ ಫಲಿತಾಂಶದಲ್ಲಿಯೂ ಒಂದೇ ನಮೂನೆ! ಪ್ರಯೋಗ ಪರೀಕ್ಷೆಗಳನ್ನು ಕೆಲವುಬಾರಿ ಪುನರಾವರ್ತಿಗೊಳಿಸಿದರೂ ಅದೇ ಫಲಿತಾಂಶ !!

ಪ್ರತಿ ಬೇಸಿಗೆಯಲ್ಲಿ ತಳಿಮಿಶ್ರಣ ಪ್ರಯೋಗಗಳನ್ನು ನಡೆಸಿ, ಪ್ರಕೃತಿಲೀಲೆಗಳನ್ನು ಮನಗಂಡನು. ಅವುಗಳನ್ನು ಅಂಕಿಅಂಶಗಳಿಗೆ ಮಾರ್ಪಡಿಸಿ ಚಳಿಗಾಲದಲ್ಲಿ ತನ್ನ ಕೊಠಡಿಯ ಕಿಟಕಿಯ ಬಳಿ ಕುಳಿತು ಕೂಲಂಕಷವಾಗಿ ವಿಶ್ಲೇಷಣೆಮಾಡುತ್ತಿದ್ದನು. ಗಿಡದ ಹೂವಿನ ಅಂತರಾಳದಲ್ಲಿ ಹೊಕ್ಕು ಅಲ್ಲಿ ನಡೆಯುವ ವಿದ್ಯಾಮಾನಗಳ ರೀತಿ ನೀತಿಗಳನ್ನು ಪರಿಶೀಲಿಸುತ್ತಿದ್ದನು. ನೀತಿಗಳನ್ನು ನಿಯಮರೂಪದಲ್ಲಿ ನಿರೂಪಿಸುತ್ತಿದ್ದನು.

ಪ್ರತಿಯೊಂದು ಜೀವಿಯಲ್ಲಿಯೂ ಒಂದೊಂದು ಗುಣ

## ಮೆಂಡೆಲನು ಎತ್ತರ ಮತ್ತು ಗಿಡ್ಡಾಗಿ ಬೆಳೆವ ಗಿಡಗಳ ಮೇಲೆ ಕೈಗೊಂಡ ತಳಿಮಿಶ್ರಣ ಪ್ರಯೋಗ ಫಲಿತಾಂಶಗಳು

**ತಂದೆತಾಯಿಯಪೀಳಿಗೆ ($P_1$)**

ಎತ್ತರದ ಗಿಡ (T T) (ಶುದ್ಧ ಸಂತಾನ) × ಗಿಡ್ಡಾಗಿ ಬೆಳೆವ ಗಿಡ (t t) (ಶುದ್ಧ ಸಂತಾನ)

**ಮೊದಲನೆಯ ತಳಿಪೀಳಿಗೆ ($F_1$) (ಅಂತರ್ ತಳೀಕರಣ).**

ಎಲ್ಲಾ ಗಿಡಗಳೂ ಎತ್ತರದ ಗಿಡಗಳು (T t) (ಮಿಶ್ರತಳಿಸಂತಾನ)

**ಎರಡನೆಯ ತಳಿಪೀಳಿಗೆ ($F_2$) (ಅಂತರ್ ತಳೀಕರಣ)**

$\frac{1}{4}$ ಎತ್ತರದ ಗಿಡಗಳು (T T) (ಶುದ್ಧ ಸಂತಾನ)

$\frac{1}{2}$ ಎತ್ತರದ ಗಿಡಗಳು (T t) (ಮಿಶ್ರತಳಿ ಸಂತಾನ)

$\frac{1}{3}$ ಗಿಡ್ಡಾಗಿ ಬೆಳೆವ ಗಿಡಗಳು (tt) (ಶುದ್ಧ ಸಂತಾನ)

**ಮೂರನೆಯ ತಳಿಪೀಳಿಗೆ ($F_3$) (ಅಂತರ್ ತಳೀಕರಣ).**

ಎತ್ತರದ ಗಿಡಗಳು (T T) (ಶುದ್ಧ ಸಂತಾನ)

ಗಿಡ್ಡ ಗಿಡ (tt) (ಶುದ್ಧ ಸಂತಾನ)

$\frac{1}{4}$ ಎತ್ತರದ ಗಿಡ (T T) (ಶುದ್ಧ ಸಂತಾನ)

$\frac{1}{2}$ ಎತ್ತರದ ಗಿಡ (Tt) ಮಿಶ್ರ ತಳಿಸಂತಾನ

$\frac{1}{4}$ ಗಿಡ್ಡ ಗಿಡಗಳು (tt) (ಶುದ್ಧ ಸಂತಾನ)

ಲಕ್ಷಣಕ್ಕೂ ಒಂದೊಂದು ಪ್ರತ್ಯೇಕವಾದ ಕಾರಣವಿರಬೇಕೆಂದು ಮೆಂಡೆಲನು ಬಗೆದನು. ಅದಕ್ಕೆ ಘಟಕ (Factor) ವೆಂದು ಹೆಸರಿಟ್ಟನು. ಅವನ ದೃಷ್ಟಿಯಲ್ಲಿ ಈ ಘಟಕ ಕೇವಲ ಕಲ್ಪನಾತ್ಮಕ. ಆದರೆ ಈಗ ಈ ಘಟಕಕ್ಕೆ ಜೀನಿ (Gene) ಎಂದು ವಿಲ್‌ಹೆಲ್ಮ್ ಯೋಹಾನ್‌ಸೆನ್ (Wilhelm L. Johannsen ೧೮೫೭–೧೯೨೭) ಇಟ್ಟ ಅರ್ಥಗರ್ಭಿತವಾದ ನಾಮಾಂಕಿತವು ಈಗ ಬಳಕೆಯಲ್ಲಿದೆ. ಇದು ಆಧುನಿಕ ದೃಷ್ಟಿಯಲ್ಲಿ ಅತಿ ಜಟಿಲಾತ್ಮಕವಾದ ರಾಸಾಯನಿಕ ಅಣು (Molecule). ಜೀವ ರಸಾಯನ ಶಾಸ್ತ್ರಜ್ಞರು ಮತ್ತು ತಳಿವಿಜ್ಞಾನಿಗಳು ಇದರ ರಾಸಾಯನಿಕ ಸ್ವರೂಪವನ್ನು ಕಂಡು ಜೀನಿಯು ಡಿಸಾಕ್ಸಿರೈಬೋ ನ್ಯೂಕ್ಲಿಯಿಕ್ ಆಸಿಡ್ (Desoxyribonucleic acid) ಲಘುವಾಗಿ ಡಿಎನ್‌ಎ (DNA) ಎಂದು ನಿರ್ಧಾರಕ್ಕೆ ಬಂದಿದ್ದಾರೆ. ಈ ಜೀನಿಗಳು ಅಥವಾ ಘಟಕಗಳು ವಾಸ್ತವಿಕವಾಗಿ ವಿವಿಕ್ತ ಕಣಗಳು (Discrete particles). ಇವು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಸಾಮಾನ್ಯವಾಗಿ ಯಾವ ಬದಲಾವಣೆಯನ್ನೂ ಹೊಂದದೆ ಪರಂಪರೆಯಾಗಿ ಹರಿದು ಬರತಕ್ಕ ಸಾಮರ್ಥ್ಯವುಳ್ಳವು. ಅಲ್ಲದೆ ಜೀವಕೋಶ ವಿಭಜನೆಯಾಗುವ ಪ್ರತಿ ಸಂದರ್ಭದಲ್ಲಿಯೂ ದ್ವಿಪ್ರತಿಯಾಗುವುದು ಅವುಗಳ ಸ್ವಭಾವ ಮತ್ತು ಚೈತನ್ಯ.

ಮೆಂಡೆಲನು ತನ್ನ ಪ್ರಯೋಗಪರೀಕ್ಷೆಗಳ ಎರಡನೆಯ ತಳಿಪೀಳಿಗೆಯಲ್ಲಿ ($F_2$) ಎತ್ತರವಾಗಿ ಮತ್ತು ಗಿಡ್ಡಾಗಿ ಬೆಳೆಯುವ ಗಿಡಗಳು ಕಾಣಿಸಿಕೊಂಡದ್ದರಿಂದ ಮೊದಲನೆಯ ತಳಿಪೀಳಿಗೆಯ ಗಿಡಗಳಲ್ಲಿ, ಅಂತೆಯೇ ಎಲ್ಲಾ ಗಿಡಗಳಲ್ಲಿಯೂ ಒಂದೊಂದು ಲಕ್ಷಣಕ್ಕೆ ಪ್ರೇರಕವಾದ ಜೀನಿಗಳು ಒಂಟೊಂಟಿಯಾಗಿರದೆ ಜೊತೆ ಜೊತೆಯಾಗಿರುತ್ತವೆಂದು ಭಾವಿಸಿದನು.

ಎರಡನೆಯದಾಗಿ, ಮೊದಲನೆಯ ಮಿಶ್ರ ತಳಿಪೀಳಿಗೆಯಲ್ಲಿ ಎತ್ತರವಾಗಿ ಬೆಳೆದ ಗಿಡಗಳೆಲ್ಲವೂ ಬಾಹ್ಯ ನೋಟದಲ್ಲಿ ಶುದ್ಧ ಸಂತಾನಗಳಂತೆಯೇ ಕಂಡರೂ, ಅಂತರಾಳದಲ್ಲಿ ಬೇರೆ ಬೇರೆ ಯಾಗಿದ್ದುವು. ಅಂದರೆ ಈ ಪೀಳಿಗೆಯಲ್ಲಿ ಜೀನಿಗಳ ದೃಷ್ಟಿಯಲ್ಲಿ ಎರಡು ಬಗೆಯ ಎತ್ತರದ ಗಿಡಗಳಿರುತ್ತವೆಯೆಂದು ನಂಬಿದನು. ವಾಸ್ತವವಾಗಿ ಇವೆರಡನ್ನೂ ಕೇವಲ ಬಾಹ್ಯ ನೋಟದಿಂದ ಗುರುತಿಸುವುದು ಅಸಾಧ್ಯ. ಇವುಗಳ ಫಸಲನ್ನು ಕೊಯ್ದು ಮುಂದಿನ ಋತುವಿನಲ್ಲಿ ಆ ಬೀಜಗಳನ್ನು ಬಿತ್ತಿದರೆ ಮಾತ್ರ (ಅಂದರೆ ಎರಡನೆಯ ತಳಿಪೀಳಿಗೆಯಲ್ಲಿ) ಯಾವುವು ಶುದ್ಧ ಸಂತಾನದ ಎತ್ತರದ ಗಿಡಗಳು ಮತ್ತು ಯಾವುವು ಮಿಶ್ರತಳಿ ಸಂತಾನದ ಗಿಡಗಳು (Hybrid generation) ಎಂಬುದನ್ನು ನಿರ್ಧರಿಸಬಹುದು.

ಮೊದಲನೆಯ ತಳಿ ಪೀಳಿಗೆಯಲ್ಲಿ ಬೆಳೆದ ಎಲ್ಲಾ ಗಿಡ ಮತ್ತು ಎರಡನೆಯ ತಳಿ ಪೀಳಿಗೆಯ ೩/೪ ಭಾಗದ ಗಿಡಗಳೆಲ್ಲವೂ ತಂದೆತಾಯಿ ಪೀಳಿಗೆಯ ಎತ್ತರವಾಗಿ ಬೆಳೆಯುವ ಲಕ್ಷಣ ವನ್ನು ಸಂಪೂರ್ಣವಾಗಿ ಹೊಂದಿದ್ದುದರಿಂದ ಆ ಲಕ್ಷಣವನ್ನು ಮೆಂಡೆಲನು ಪ್ರಬಲ ಗುಣ (Dominant character)ವೆಂದು ಕರೆದನು. ಅಂತೆಯೇ ಕುಬ್ಜವಾಗಿ ಬೆಳೆವ ಲಕ್ಷಣವು ಮೊದಲ ನೆಯ ಮಿಶ್ರತಳಿ ಪೀಳಿಗೆಯಲ್ಲಿ ಕಾಣಿಸಿಕೊಳ್ಳದಿದ್ದ ಕಾರಣ ದಿಂದಲೂ ಮತ್ತು ಎರಡನೆಯ ತಳಿಪೀಳಿಗೆಯಲ್ಲಿ ೧/೪ ಭಾಗದ ಗಿಡಗಳು ಸಂಪೂರ್ಣವಾಗಿ ಗಿಡ್ಡಾಗಿಯೇ ಬೆಳೆದ ಕಾರಣ ದಿಂದಲೂ ಈ ಗುಣವು ಸುಪ್ತವಾಗಿರಬೇಕು ಎಂದು ಭಾವಿ ಸಿದನು. ಈ ಗುಣಲಕ್ಷಣಕ್ಕೆ ಅಪ್ರಬಲ ಗುಣ (Recessive character) ಎಂದು ಹೆಸರಿಟ್ಟನು.

ಮೆಂಡೆಲನು ಗುಣಲಕ್ಷಣಗಳಿಗೆ ಪ್ರೇರಕವಾದ ಘಟಕ ಅಥವಾ ಜೀನಿಗಳಿಗೆ ಒಂದು ಗೊತ್ತಾದ, ಅರ್ಥಗರ್ಭಿತವಾದ ಲಾಂಛನವನ್ನು ಕೊಟ್ಟನು. ಈ ಲಿಪಿ ಸಂಕೇತಗಳು ನಿಜವಾಗಿಯೂ ನಿಗೂಢವಾದ ಸಮಸ್ಯೆಯನ್ನು ಬಿಡಿಸುವ ಸರಳತೆಯ ಸಂಕೇತವಾದುವು. ಎತ್ತರದ ಗುಣಲಕ್ಷಣಕ್ಕೆ ಪ್ರೇರಕವಾದ ಘಟಕಕ್ಕೆ 'T' ಎಂದೂ ಮತ್ತು ಗಿಡ್ಡತನದ ಬೆಳೆವಣಿಗೆಗೆ ಕಾರಣವಾದ ಘಟಕಕ್ಕೆ 't' ಎಂಬ ಅಕ್ಷರವನ್ನು ಹೆಸರಿಟ್ಟನು. ಅಲ್ಲದೆ 'T' ಎಂಬುದು (Tallness) ಪ್ರಬಲಗುಣವನ್ನು ಮತ್ತು 't' ಎಂಬುದು ಅಪ್ರಬಲ ಗುಣವಾದ ಗಿಡ್ಡುತನವನ್ನು (Dwarfness) ಪ್ರತಿನಿಧಿಸುತ್ತವೆಂದು ಅವನಿಗೆ ಮನವರಿಕೆಯಾಯಿತು.

ಪ್ರತಿ ಜೀವಿಯಲ್ಲಿಯೂ ಒಂದು ಗುಣಕ್ಕೆ ಸಂಬಂಧಿಸಿದ ಎರಡೆರಡು ಘಟಕ ಅಥವಾ ಜೀನಿಗಳಿರುವುದರಿಂದ ಸಾಂಕೇತಿಕವಾಗಿ ಹೇಳುವುದಾದರೆ ಶುದ್ಧ ಸಂತಾನದ ಎತ್ತರದ ಗಿಡಗಳಲ್ಲಿ "T T" ಇರುವುದೆಂದೂ, ಶುದ್ಧ ಸಂತಾನದ ಗಿಡ್ಡಾಗಿ ಬೆಳೆವ ಗಿಡಗಳಲ್ಲಿ "t t" ಇರುವುದೆಂದೂ ಮತ್ತು ಮಿಶ್ರತಳಿಸಂತಾನದ ಎತ್ತರದ ಗಿಡಗಳಲ್ಲಿ 'T t' ಇರುವುದೆಂದೂ ಪರಿಭಾವಿಸಿ ಮುಂದೆ ಹೆಜ್ಜೆಯಿಟ್ಟನು.

ಪ್ರಬಲಗುಣಲಕ್ಷಣದ ಆನುವಂಶೀಯತೆಯಲ್ಲಿ ಮಿಶ್ರತಳಿಯನ್ನೂ ಮತ್ತು ಶುದ್ಧ ಸಂತಾನವನ್ನೂ ಬಾಹ್ಯ ನೋಟದಿಂದ ಗುರುತಿಸುವುದು ಕಷ್ಟ. ಈ ಬಾಹ್ಯನೋಟವನ್ನು ಮೆಂಡೆಲನು ದೃಶ್ಯರೂಪ (Phenotype) ಎಂದು ಕರೆದನು. ಮೇಲಿನ ಪ್ರಸಂಗದಲ್ಲಿ ಎತ್ತರವಾಗಿ ಬೆಳೆವ ಮತ್ತು ಗಿಡ್ಡಾಗಿ ಬೆಳೆವ ಲಕ್ಷಣಗಳು ಆ ಗಿಡದ ದೃಶ್ಯರೂಪ. ಆದರೆ ಶುದ್ಧಸಂತಾನದ

ಮತ್ತು ಮಿಶ್ರತಳಿಯ ದೇಹದಲ್ಲಿರುವ ಜೀನಿಗಳ ಸೂತ್ರವನ್ನು (ಉದಾಹರಣೆಗೆ "T T", "t t" ಮತ್ತು "T t") ಜೀನಿರೂಪ (Genotype) ಎಂದು ಕರೆದನು. ಈ ಜೀನಿರೂಪವೇ ಆ ಜೀವಿಯ ನಿಜವಾದ ಲಕ್ಷಣ. ಇದು ಅರ್ಥವಾಗಬೇಕಾದರೆ ಎರಡು ಮಿಶ್ರತಳಿಗಳನ್ನು ಅಡ್ಡಹಾಯಿಸಿದರೆ ಮಾತ್ರ ಸ್ಪಷ್ಟವಾಗುತ್ತದೆ.

ಮೂರನೆಯದಾಗಿ ಮಿಶ್ರತಳಿಯಲ್ಲಿ (Hybrid) T ಮತ್ತು t ಘಟಕಗಳೆರಡೂ ಜೊತೆಗೂಡಿದ್ದರೂ ಪರಸ್ಪರ ಮಿಶ್ರಗೊಳ್ಳುವುದಿಲ್ಲ. ಅಥವಾ ಒಂದು ಮತ್ತೊಂದನ್ನು ಮಾರ್ಪಡಿಸುವುದಿಲ್ಲವೆಂದು ಅನುಮೇಯಮಾಡಿಕೊಂಡನು. ಜೀವಕೋಶದಲ್ಲಿ ಇವೆರಡು ಜೊತೆಯಲ್ಲಿದ್ದರೂ ತಮ್ಮ ವ್ಯಕ್ತಿತ್ವವನ್ನು ಸದಾ ಉಳಿಸಿಕೊಂಡಿರುತ್ತವೆ. ಮಿಶ್ರತಳಿಯಲ್ಲಿ ಲಿಂಗಕೋಶಿಕಗಳು (Sex-cells) ಉತ್ಪಾದನೆಯಾಗುವಾಗ—ಸಸ್ಯದಲ್ಲಿ ಪರಾಗ ಮತ್ತು ಅಂಡಕ–ಪ್ರಾಣಿಗಳಲ್ಲಿ ಶುಕ್ರ ಮತ್ತು ಅಂಡ—ಈ T ಮತ್ತು t ಘಟಕಗಳು ಯಾವ ಬಗೆಯ ಮಾರ್ಪಾಟನ್ನೂ ಹೊಂದದೆ ಪ್ರತ್ಯೇಕಗೊಳ್ಳುತ್ತವೆ. ಆದುದರಿಂದ ಪ್ರತಿ ಲಿಂಗಕೋಶಿಕದಲ್ಲಿಯೂ ಕೇವಲ T ಅಥವಾ t ಘಟಕ ಮಾತ್ರ ಇರುತ್ತದೆ. ಅಂದರೆ ಲಿಂಗಕೋಶಿಕಗಳು ಪರಿಶುದ್ಧವಾಗಿರುತ್ತವೆ ಎಂದರ್ಥ.

ಈ ಮೂರು ಮುಖ್ಯಾಂಶಗಳನ್ನೊಳಗೊಂಡ—ಏಕಮಾನ ಘಟಕ (Unit of factor), ಪ್ರಾಬಲ್ಯ (Dominance) ಮತ್ತು ಲಿಂಗಕೋಶಿಕಗಳ ಪರಿಶುದ್ಧತೆ (Purity of gametes).—ಸೂತ್ರವನ್ನು "ಪ್ರತ್ಯೇಕತೆಯ ನಿಯಮ" (Law of segregation) ಎಂದು ಮೆಂಡೆಲನು ಕರೆದನು.

ಒಂದು ಜೀವಿಯಲ್ಲಿ ಹಲವಾರು ಗುಣಲಕ್ಷಣಗಳಿಗೆ ಪ್ರೇರಕ

ವಾದ ಮತ್ತು ಪ್ರತ್ಯೇಕ ಪ್ರತ್ಯೇಕವಾದ ಘಟಕ(ಜೀನಿ)ಗಳಿರುವುದರಿಂದ ಎರಡು ಜೊತೆ ವಿಭಿನ್ನ ಘಟಕಗಳಿದ್ದರೆ ಅವುಗಳ ವರ್ತನೆಯೇನು ? ಎಂಬುದು ಮೆಂಡೆಲನ ಮುಂದಿನ ಪ್ರಶ್ನೆ. ಈ ಪ್ರಶ್ನೆಯನ್ನು ಬಿಡಿಸಲು ಅವನು ಕೈಗೊಂಡ ಪ್ರಯೋಗ ಪರೀಕ್ಷೆಗಳಲ್ಲೊಂದನ್ನು ಸ್ಥೂಲವಾಗಿ ತಿಳಿಯೋಣ. ಮೆಂಡೆಲನು ಈ ಪ್ರಯೋಗದಲ್ಲಿ ಕೆನ್ನೀಲಿ ಹೂ ಬಿಡುವ ಮತ್ತು ಎತ್ತರವಾಗಿ ಬೆಳೆವ ಶುದ್ಧ ಸಂತಾನದ ಗಿಡದೊಡನೆ (TTCC: Tall and Coloured), ಬಿಳಿ ಹೂವು ಬಿಟ್ಟು ಗಿಡ್ಡಾಗಿ ಬೆಳೆವ (tt cc : Dwarf and White flower) ಶುದ್ಧ ಸಂತಾನ ಗಿಡವನ್ನು ಮೇಲೆ ವಿವರಿಸಿದ ರೀತಿಯಲ್ಲಿ ಅಡ್ಡಹಾಯಿಸಿದನು.

ಮೊದಲನೆಯ ತಳಿಪೀಳಿಗೆಯಲ್ಲಿ ಎಲ್ಲಾ ಗಿಡಗಳೂ ಕೆನ್ನೀಲಿ ಹೂವು ಬಿಡುವ ಎತ್ತರದ ಗಿಡಗಳಾಗಿದ್ದುವು. ಅಂದರೆ ಕೆನ್ನೀಲಿ ಬಣ್ಣದ ಹೂವು ಪ್ರಬಲ ಗುಣವುಳ್ಳದ್ದಾಗಿದೆ ಎಂದಾಯಿತು. ಇವು ಮಿಶ್ರತಳಿಗಳಾಗಿ (Tt Cc)ದ್ದುದರಿಂದ ಎರಡನೆಯ ತಳಿ ಪೀಳಿಗೆಯಲ್ಲಿ ($F_2$) ನಾಲ್ಕು ಬಗೆಯ ಗಿಡಗಳು ೯ : ೩ : ೩ : ೧ ರ ಪ್ರಮಾಣದಲ್ಲಿ ಕಾಣಿಸಿಕೊಂಡವು : ಅವು ಅನುಕ್ರಮವಾಗಿ (೧) ಕೆನ್ನೀಲಿ ಹೂವು ಬಿಡುವ ಎತ್ತರದ ಗಿಡಗಳು ೯/೧೬, (೨) ಕೆನ್ನೀಲಿ ಹೂವು ಬಿಡುವ ಗಿಡ್ಡಾಗಿ ಬೆಳೆದ ಗಿಡಗಳು ೩/೧೬, (೩) ಬಿಳಿ ಹೂವು ಬಿಡುವ ಎತ್ತರದ ಗಿಡಗಳು ೩/೧೬ ಮತ್ತು (೪) ಬಿಳಿ ಹೂವು ಬಿಡುವ ಗಿಡ್ಡಾಗಿ ಬೆಳೆದ ಗಿಡಗಳು ೧/೧೬.

ಹೀಗೆಯೇ ಮೂರು ಜೊತೆ ಪರಸ್ಪರ ವ್ಯತಿರಿಕ್ತ ಗುಣ ವಿಶೇಷಗಳನ್ನುಳ್ಳ ಗಿಡಗಳನ್ನು ಪರಸ್ಪರ ಅಡ್ಡಹಾಯಿಸಿದಾಗ (ಹಳದಿ ಪೊರೆಯಿಂದ ಆವೃತವಾದ ದುಂಡನೆಯ ಬೀಜಗಳನ್ನು ಬಿಡುವ ಎತ್ತರದ ಗಿಡಗಳು ಮತ್ತು ಹಸುರು ಪೊರೆಯುನ್ನುಳ್ಳ

ಸುಕ್ಕು ನಿರಿಗೆಯ ಬೀಜಗಳನ್ನು ಬಿಡುವ ಕುಬ್ಜ ಗಿಡಗಳು (YY RR TT × yy rr tt) ೨೭ : ೯ : ೯ : ೯ : ೩ : ೩ : ೩ : ೧ರ ಪ್ರಮಾಣದಲ್ಲಿ ಎಂಟು ಬಗೆಯ ಗಿಡಗಳು ಕಾಣಿಸಿಕೊಂಡವು.

ಈ ಪ್ರಯೋಗಪರೀಕ್ಷೆಗಳಿಂದ ಮೆಂಡೆಲನಿಗೆ ಅರ್ಥವಾದದ್ದು ಇಷ್ಟು. ಒಂದು ಗಿಡದಲ್ಲಿ ಎಷ್ಟೇ ಜೊತೆ ಘಟಕ (ಜೀನಿ) ಗಳಿದ್ದರೂ ಪರಸ್ಪರ ಯಾವ ಬಗೆಯ ಸಂಪರ್ಕವೂ ಇಲ್ಲದೆ ಅವು ಸ್ವತಂತ್ರವಾಗಿ ವಿಂಗಡಿಕೆಯಾಗುತ್ತವೆ. ಇದೇ ಅವನ ಎರಡನೆಯ ನಿಯಮ: ಸ್ವತಂತ್ರ ವಿಂಗಡಿಕೆಯ ನಿಯಮ (Law of Independent Assortment).

ಮೆಂಡೆಲನು ೧೮೫೮ರಿಂದ ಎಂಟು ವರ್ಷಗಳ ಕಾಲ ಒಂದೇ ಸಮನೆ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು ತಾಳ್ಮೆಯಿಂದ ಅಂದರೆ ೧೮೬೫ರ ಕೊನೆಯವರೆಗೂ ನಡೆಸಿದನು. ತನ್ನ ಪ್ರಯೋಗ ಪರೀಕ್ಷೆಗಳ ವಿಧಾನ ಮತ್ತು ಫಲಿತಾಂಶಗಳನ್ನು ಆಗಿನ ಕಾಲಕ್ಕೆ ಸಸ್ಯಶಾಸ್ತ್ರ ಪರಿಣಿತರಾಗಿದ್ದ ಕಾರ್ಲ್ ವೆಲ್‌ಹೆಲ್ಮ್ ನೆಗೇಲಿ (Karl Welhelm Nägeli ೧೮೧೭-೧೮೯೧) ಯವರಿಗೆ ವಿವರವಾಗಿ ಕಾಗದಪತ್ರಗಳ ಮೂಲಕ ಪ್ರಾರಂಭ ದಿಂದಲೂ ತಿಳಿಸುತ್ತಾ ಬಂದಿದ್ದನು. ಅಲ್ಲದೆ ಅವರಿಂದ ಯೋಗ್ಯ ಸಲಹೆಗಳನ್ನು ಪಡೆಯುತ್ತಿದ್ದನಲ್ಲದೆ ನೆಗೇಲಿಯವರ ಹಲವಾರು ಪ್ರಕಟಿತ ಪರಿಶೋಧನೆಯ ಕಿರುಹೊತ್ತಿಗೆಗಳನ್ನು ಕೂಡ ಪಡೆದಿದ್ದನು.

ನೆಗೇಲಿಯವರಿಗೆ ಮೆಂಡೆಲನು ಕೈಕೊಂಡ ಅತ್ಯಂತ ಸರಳವೂ ಮತ್ತು ಪ್ರಾಯೋಗಿಕವೂ ಆದ ತಳಿಮಿಶ್ರಣ ಪ್ರಯೋಗ ಪರೀಕ್ಷೆ ಗಳ ಸಹಾಯದಿಂದ ನಿರೂಪಿಸಿದ ಆನುವಂಶೀಯತೆಯ ನಿಯಮ ಗಳು—ಗಣಿತಶಾಸ್ತ್ರದ ಅಂಕಿ ಅಂಶಗಳಿಗೆ ಅನುಗುಣವಾಗಿದ್ದ

ರಿಂದಲೋ ಏನೋ–ಅರ್ಥವಾಗಲಿಲ್ಲ. ಮೆಂಡೆಲನು ಭಾವಿಸಿದ್ದ ಮಿಶ್ರತಳಿಯ ಲಿಂಗಕೋಶಿಕಗಳ ಪರಿಶುದ್ಧತೆಯನ್ನು ಅಸಾಧ್ಯ ಮತ್ತು ಅಸಮಂಜಸವೆಂದು ಪರಿಗಣಿಸಿದರು. ಮೆಂಡೆಲನ ವಾಸ್ತವಿಕ ಸಂಗತಿ(Facts) ಮತ್ತು ಉಪಕಲ್ಪನೆ(Hypothesis) ಗಳಿಂದ ಕೂಡಿದ ಹೊಸ ವಿಜ್ಞಾನವನ್ನು ಗ್ರಹಿಸಲಸಮರ್ಥ ರಾದರು. ಹಲವಾರು ಕಾಗದಪತ್ರಗಳು ಆಗಿಂದಾಗ್ಗೆ ಪರಸ್ಪರ ವಿನಿಮಯವಾಗುತ್ತಿದ್ದರೂ ಅವರಿಬ್ಬರಲ್ಲಿ ಒಮ್ಮನಸ್ಸು ಬರಲಿಲ್ಲ. ಒಬ್ಬರು ಮತ್ತೊಬ್ಬರನ್ನು ಅರ್ಥಮಾಡಿಕೊಳ್ಳಲಿಲ್ಲ. ನೆಗೇಲಿ ಯವರು ತಾವೇ ತಳಿಮಿಶ್ರಣ ಪ್ರಯೋಗಗಳನ್ನು ಪುನಃ ಪರೀಕ್ಷಿಸುವುದಾಗಿ ಮೆಂಡೆಲನಿಂದ ಪ್ರಾಯೋಗಿಕ ಬಟಾಣಿ ಬೀಜಗಳನ್ನು ಕೂಡ ಪಡೆದಿದ್ದರು. ಆದರೆ ಅವರು ಮೆಂಡೆಲ ನಂತೆ ತಳಿಮಿಶ್ರಣ ಪ್ರಯೋಗಗಳನ್ನು ಮಾಡಿದ್ದಕ್ಕೆ ಮತ್ತು ಅಂಕಿ ಅಂಶಗಳನ್ನು ಸಂಗ್ರಹಿಸಿದ್ದಕ್ಕೆ ಯಾವ ದಾಖಲೆಯೂ ಕಾಣಬರುವುದಿಲ್ಲ.

ಮಾನವನ ವಿಚಾರದೀಪ್ತಿಯನ್ನು ಮತ್ತು ಅದರ ವ್ಯಾಪ್ತಿ ಯನ್ನು ಬದಲಾಯಿಸಬೇಕಾದರೆ ಅಸಾಧಾರಣ ಮೇಧಾವಿ ಗಳಿಗೆ ಮತ್ತು ಕೆಚ್ಚೆದೆಯ ವೀರರಿಗೆ ಮಾತ್ರ ಸಾಧ್ಯ. ಮೇಲಾಗಿ ವಾತಾವರಣವೂ ಕೂಡ ಪ್ರೋತ್ಸಾಹಿಸುವ ಸಾಧನೆಯಾಗಿರ ಬೇಕು. ವಿಚಾರಸರಣಿಯ ಪ್ರವಾಹಕ್ಕೆ ತಟಕ್ಕನೆ ಅಣೆಕಟ್ಟು ಕಟ್ಟಿ ಮತ್ತೊಂದೆಡೆಗೆ ಹರಿಸುವುದು ಚಾರ್ಲ್ಸ್ ರಾಬರ್ಟ್ ಡಾರ್ವಿನ್ (Charles Robert Darwin ೧೮೦೯–೧೮೮೨) ಎಂಬ ದಿಟ್ಟತನದ ಧೀರ ವಿಜ್ಞಾನಿಯಂತಹವರಿಗೆ ಮಾತ್ರ ಸಾಧ್ಯ.

ಇಂಗ್ಲೆಂಡ್ ದೇಶದ ಚಾರ್ಲ್ಸ್ ಡಾರ್ವಿನ್ನನು ೧೮೫೯ರಲ್ಲಿ

"ಪ್ರಕೃತಿ ಕೈವಾಡದ ಮೂಲಕ ಜೀವಜಾತಿಗಳ ಹುಟ್ಟು" (Origin of species by means of Natural Selection) ಎಂಬ ಕ್ರಾಂತಿಕಾರಕ ಉದ್ಗ್ರಂಥವನ್ನು ಪ್ರಕಟಿಸಿದನು. ದಕ್ಷಿಣ ಅಮೆರಿಕಾ ಖಂಡದ ಪಶ್ಚಿಮ ತೀರದಿಂದ ಸುಮಾರು ೯೬೦ ಕಿಲೋ ಮೈಲು ದೂರದಲ್ಲಿರುವ ಗಾಲಪ್ಯಾಗೋ ದ್ವೀಪಗಳಲ್ಲಿರುವ ಫಿನ್ಚ್ (Finch) ಪಕ್ಷಿಗಳನ್ನು ಕಂಡು ಅವುಗಳ ಕೊಕ್ಕುಗಳು ಒಂದೊಂದು ದ್ವೀಪದಲ್ಲಿ ಒಂದೊಂದು ಬಗೆಯ ವೈಶಿಷ್ಟ್ಯ ಗುಣವನ್ನು ಹೊಂದಿರುವುದಾಗಿ ಅವನ ಮನವರಿಕೆಯಾಯಿತು. ಆ ದ್ವೀಪದ ಸ್ಥಿತಿಗತಿಗಳಿಗೆ ಆ ಪಕ್ಷಿಗಳ ಕೊಕ್ಕುಗಳು ಹೊಂದಿಕೆಯಾಗಿರುವುದೇ ಕಾರಣವೆಂದು ಶಂಕೆಪಟ್ಟನು. ಹೀಗೆ ಅವನು ದೇಶಪರ್ಯಾಟನೆಮಾಡಿ ಕಣ್ಣಿನಿಂದ ಕಂಡ ಮತ್ತು ಅನುಭವದಿಂದ ಅರಿತ ಅಸಂಖ್ಯಾತ ಉದಾಹರಣೆಗಳೊಂದಿಗೆ ಜೀವವಿಕಾಸ ತತ್ವದ ಹೊನಲನ್ನು ಜಗತ್ತಿಗೆ ಧಾರೆಯೆರೆದನು; ಜೀವವಿಕಾಸದ ಸಿದ್ಧಾಂತವನ್ನು ನಿರೂಪಿಸಿದನು.

ಡಾರ್ವಿನ್ನನ ಜೀವವಿಕಾಸತತ್ವದ ತಿರುಳು ಇಷ್ಟು: ಪ್ರತಿಯೊಂದು ಜೀವಿಗೂ ಅತ್ಯಧಿಕ ಸಂಖ್ಯೆಯಲ್ಲಿ ಸಂತಾನೋತ್ಪತ್ತಿ ಮಾಡುವ ಸಾಮರ್ಥ್ಯವಿದೆ. ಸಂತಾನವೆಲ್ಲವೂ ಬದುಕಿ ಬಾಳಿದರೆ ಕೇವಲ ಕೆಲವು ಪೀಳಿಗೆಯ ಕೊನೆಯಲ್ಲಿಯೇ ಅವುಗಳಿಗೆ ಆಹಾರದಲ್ಲಿ ಕೊರತೆ ಮತ್ತು ಸ್ಥಳಾಭಾವ ಉಂಟಾಗುತ್ತದೆ. ತತ್ಪರಿಣಾಮವಾಗಿ ಅವುಗಳಲ್ಲಿ ಪರಸ್ಪರ ಬಾಳ್ವೆಯ ಹೋರಾಟ ಪ್ರಾರಂಭವಾಗಿ ಅದರ ಫಲವಾಗಿ ಜೀವಿಗಳ ಸಂಖ್ಯೆಯ ಬೆಳವಣಿಗೆಯು ತಡೆಗಟ್ಟುತ್ತದೆ. ವೈವಿಧ್ಯತೆಯು ಜೀವರಾಶಿಗಳ ಪ್ರಧಾನ ಲಕ್ಷಣ. ಈ ಬಾಳಿನ ಹೋರಾಟದಲ್ಲಿ ಶೂರ ಮತ್ತು ಧೀರನಿಗೆ ಮಾತ್ರ ಜಯಮಾಲೆ. ವೈವಿಧ್ಯಮಯ ಜೀವರಾಶಿಯಲ್ಲಿ

ಅರ್ಹವಾದದ್ದು ಮತ್ತು ಬಲಯುತವಾದದ್ದು ಉಳಿದು, ದುರ್ಬಲ ಅಥವಾ ಅನರ್ಹವಾದ ಜೀವಿಗಳು ನಾಶವಾಗುತ್ತವೆ. ಈ ಕಾರಣದಿಂದ ಕಾಲಚಕ್ರ ಉರುಳಿದಂತೆ ಬಲಾಢ್ಯಪೃಥ್ವಿಯಾಗಿ ಜೀವಜಗತ್ತು ರೂಪಗೊಳ್ಳುತ್ತಿರುತ್ತದೆ. ಈ ರೀತಿಯಿಂದ ಕಾಲ ಕಾಲಕ್ಕೆ ಹೊಸ ಹೊಸ ಜೀವಪ್ರಭೇದ (Species) ಗಳು ಸೃಷ್ಟಿಯಾಗುತ್ತವೆ. ಇದೇ ಪ್ರಕೃತಿ ಕೈವಾಡದ ಸಿದ್ಧಾಂತದ ತಿರುಳು.

ಹಲವಾರು ಶತಮಾನಗಳಿಂದ ಚರ್ಚಿನ ವಜ್ರಮುಷ್ಟಿಯಲ್ಲಿದ್ದ ಕ್ರೈಸ್ಥಮತೀಯರಿಗೆ ಈ ಹೊಸ ತತ್ವ ಬರಸಿಡಿಲು ಬಡಿದಂತಾಯಿತು. ಸೃಷ್ಟಿ ಶ್ರೇಣಿಯಲ್ಲಿ ಮಾನವನೇ ಅತ್ಯಂತ ಶ್ರೇಷ್ಠ ಮತ್ತು ಅವನದು ಭಗವಂತನ ವಿಶೇಷ ಸೃಷ್ಟಿ (Special creation) ಎಂಬ ಭಾವನೆಯನ್ನು ಬೈಬಲ್ ಪವಿತ್ರ ಗ್ರಂಥದ ನಿರೂಪಣೆಗಳನ್ನು ಚರ್ಚ್‌ಗಳು ಬೋಧಿಸುತ್ತಾ ಬಂದಿದ್ದುವು. ಆದುದರಿಂದ ಜಗತ್‌ಸೃಷ್ಟಿಯ ಕಥೆ ಮತ್ತು ಶ್ರುತಿವಾಕ್ಯಗಳಲ್ಲಿ ನಂಬಿಕೆ ಸಹಜವಾಗಿಯೇ ಜನರಲ್ಲಿ ರಕ್ತಗತವಾಗಿತ್ತು. ಈಗ ಡಾರ್ವಿನ್ನನ ಹೊಸ ಸಿದ್ಧಾಂತವು ಮೂಢ ನಂಬಿಕೆಗಳನ್ನು ಸಮೂಲವಾಗಿ ನಿರ್ನಾಮಗೊಳಿಸುವ ಪರ್ವ ಕಾಲವನ್ನು ರೂಪಿಸಿತು. ಅಲ್ಲದೆ ಆಸ್ತಿಕ ಮತ್ತು ನಾಸ್ತಿಕರಲ್ಲಿ ವಾದವಿವಾದಗಳು ಅಲ್ಲದೆ ಅನಾಗರಿಕ ಜಗಳಗಳೂ ಕೂಡ ಪ್ರಾರಂಭವಾದುವು.

ಡಾರ್ವಿನ್ನನು "ಪ್ರತಿಯೊಂದು ಜೀವಿಯೂ ನಿರಂತರವಾಗಿ ಬದಲಾಗುವ ಪ್ರೇರಕಶಕ್ತಿ (Dynamic)" ಎಂದು ಪ್ರತಿಪಾದಿಸಿದ್ದರೂ, ಆನುವಂಶೀಯತೆಯ ತಳಿಮಿಶ್ರಣಕಾರ್ಯದ ಮತ್ತು ಅದರ ಪ್ರಾಮುಖ್ಯತೆಯ ಜ್ಞಾನದಲ್ಲಿ ಬಹಳ ಹಿಂದಿದ್ದನು.

ಇದರಿಂದಲೇ ಅವನು ಕಂಡ ಕೆಲವು ಆನುವಂಶೀಯತೆಗೆ ಸಂಬಂಧಿಸಿದ ಪ್ರಸಂಗಗಳನ್ನು ವಿವರಿಸಿಲ್ಲ. ಅಲ್ಲದೆ ಮೆಂಡೆಲ್ ಪಾದ್ರಿಯ ಮತ್ತು ಅವನ ಆನುವಂಶೀಯತೆಯ ಅಧ್ಯಯನದ ಬಗ್ಗೆ ನಡೆಸಿದ ಪ್ರಯೋಗ ಪರೀಕ್ಷೆಗಳ ವಿಚಾರ ಅವನ ಗಮನ ವನ್ನು ಸೆಳೆದಿದ್ದರೆ ತನ್ನ ಜೀವವಿಕಾಸ ತತ್ವಕ್ಕೆ ಸಹಾಯಕ ವಾಗುತ್ತಿತ್ತು; ಮೇಲಾಗಿ ಪುಷ್ಟಿಯೂ ಸಿಗುತ್ತಿತ್ತು.

ಕ್ಯಾಥೋಲಿಕ್ ಕ್ರೈಸ್ತ ಸನ್ಯಾಸಿ ಮೆಂಡೆಲ್‌ಪಾದ್ರಿಗೆ ಡಾರ್ವಿನ್‌ನ ಜೀವವಿಕಾಸದ ಸಿದ್ಧಾಂತದಲ್ಲಿ ಸಂಪೂರ್ಣ ವಿಶ್ವಾಸವಿತ್ತು; ಅಚಲವಾದ ನಂಬಿಕೆಯಿತ್ತು. ತನ್ನ "ಮಕ್ಕ ಳಂತೆ" ಪ್ರೀತಿಸಿ, ಪಾಲಿಸಿ ಬೆಳೆಸಿದ್ದ ಬಟಾಣಿ ಗಿಡಗಳು ಜೀವ ವಿಕಾಸದಲ್ಲಿ ವಿಶ್ವಾಸ ಹುಟ್ಟುವಂತೆ ಮೊದಲೇ ತೋಳುಗಂಬ ದಂತಿದ್ದುವು; ಮಾರ್ಗದರ್ಶನ ಮಾಡಿದ್ದುವು. ವಿಕಾಸದ ಹಿನ್ನೆಲೆಯಲ್ಲಿ ತಳಿಮಿಶ್ರಣವು ಚಾಲಕ ಮತ್ತು ಪ್ರೇರಕಶಕ್ತಿ ಯೆಂದು ಮೆಂಡಲನಿಗೆ ಮನವರಿಕೆಯಾಗಿತ್ತು. ತೆರೆಯ ಮರೆಯಲ್ಲಿದ್ದು ಸೂತ್ರ ಚಲನಕಾರಕಗಳೇನೆಂಬುದು ಅವನಿಗೆ ಅರಿವಾಗಿತ್ತು. ಪ್ರಕೃತಿಯಲ್ಲಿ ಗಾಳಿ ಮತ್ತು ಕೀಟಗಳ ಸಹಾಯದಿಂದ ಸ್ವಾಭಾವಿಕವಾಗಿ ನಡೆಯುವ ಪರಾಗಾರ್ಪ ಣೆಯ ಕಾರ್ಯವನ್ನು ತಳಿಮಿಶ್ರಣ ಪ್ರಯೋಗದಲ್ಲಿ ಕೃತಕ ಪರಾಗರ್ಪಣೆಯು ನಿರ್ವಹಿಸುತ್ತದೆ ಎಂಬುದು ಮನದಟ್ಟಾ ಗಿತ್ತು. ಸಂಪ್ರದಾಯನಿಷ್ಠ ಈ ಕ್ಯಾಥೋಲಿಕ್ ಪಾದ್ರಿಗೆ ಗೋಚರವಾದ ಈ ಹೊಸ ಜ್ಞಾನ ಆಸ್ತಿಕ ಕ್ರೈಸ್ತಮತೀಯರಿಗೆ ದಿಗ್ಭ್ರಮೆಗೊಳಿಸಿರಬೇಕಲ್ಲವೇ? ಆದರೆ ಮೆಂಡೆಲನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳು ಮತ್ತು ಅವುಗಳ ಮಹತ್ವ ಅವರಿಗೆ ಅರ್ಥವಾಗಿದ್ದರೆ ತಾನೆ!

ಬ್ರೂಯಿನ್ ಪಟ್ಟಣದಲ್ಲಿ ಪ್ರಕೃತಿ ವಿಜ್ಞಾನದ ಸಂಘವೊಂದು ೧೮೬೧ರಲ್ಲಿ ಪ್ರಾರಂಭವಾಯಿತು. ಆಗತಾನೇ ಆ ಪಟ್ಟಣದಲ್ಲಿ ಪಾಲಿಟೆಕ್ನಿಕ್ ಇನ್ಸ್ಟಿಟ್ಯೂಟ್ ಎಂಬ ವಿದ್ಯಾಸಂಸ್ಥೆ ಸ್ಥಾಪಿತವಾಗಿತ್ತು. ಆ ಇನ್ಸ್ಟಿಟ್ಯೂಟಿನ ಭೂಗಣಿತಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಗುಸ್ಟಾಫ್ ಫೋನ್ ನಿಸಲ್ (Gustav Von Nissl) ರವರ ಮುಂದಾಳತ್ವದಲ್ಲಿಯೇ ಈ ವಿಜ್ಞಾನ ಸಂಘವು ರೂಪುಗೊಂಡಿದ್ದು. ಮೇಲಾಗಿ ಅವರು ಅನೇಕ ವರ್ಷಗಳವರೆಗೂ ಆ ಸಂಘದ ಕಾರ್ಯದರ್ಶಿಗಳೂ ಆಗಿದ್ದರು. ಆ ಸಂಘದ ಸದಸ್ಯರೆಲ್ಲರೂ ವಿಜ್ಞಾನಿಗಳೇ, ಒಟ್ಟು ನಲವತ್ತು ಮಂದಿ. ಅವರಲ್ಲಿ ಮುಖ್ಯರಾದವರೆಂದರೆ ಸಸ್ಯಶಾಸ್ತ್ರ ಮತ್ತು ಭೂಗರ್ಭಶಾಸ್ತ್ರದ ಪ್ರಾಧ್ಯಾಪಕರಾದ ಮಾಕೋಸ್ಕಿ (Makosky), ಸಸ್ಯಶಾಸ್ತ್ರಜ್ಞರಾದ ಕಾಲ್‌ಮುಸ್ (Calmus) ಮತ್ತು ನಾವೆ (Nave), ರಸಾಯನಶಾಸ್ತ್ರಜ್ಞರಾದ ಸೆರ್‌ಮಾಕ್ (Czermak), ಉಳಿದವರಲ್ಲಿ ಪಾದ್ರಿ ಗ್ರೆಗೋರ್ ಮೆಂಡೆಲ್‌ನೂ ಒಬ್ಬ.

ಆ ಪ್ರಕೃತಿ ವಿಜ್ಞಾನ ಸಂಘದ ಪದ್ಧತಿಯ ಪ್ರಕಾರ ಸಂಘದ ಸದಸ್ಯರು ಆಗಾಗ್ಗೆ ನಡೆಯುವ ಸಭೆಗಳಲ್ಲಿ ತಾವು ಕೈಗೊಂಡ ಅಥವಾ ತಲ್ಲೀನರಾಗಿರುವ ಪರಿಶೋಧನೆಗಳನ್ನು ವಿವರಿಸಬೇಕಾಗಿತ್ತು. ಅಲ್ಲದೆ ವರ್ಷಾದ್ಯಂತ ನಡೆದ ಪ್ರಯೋಗ ಪರೀಕ್ಷೆಗಳ ಮತ್ತು ಪರಿಶೋಧನೆಗಳ ಬಗ್ಗೆ ನಡೆದ ಭಾಷಣಗಳನ್ನು ಸಂಗ್ರಹಿಸಿ ಪ್ರಬಂಧ ರೂಪದಲ್ಲಿ ತಮ್ಮ ಸಂಘದ ವರದಿಯಲ್ಲಿ ಪ್ರಕಟಿಸುವುದು ಸಂಪ್ರದಾಯಕವಾಗಿತ್ತು.

ಮೆಂಡೆಲನು ತನ್ನ ಎಂಟು ವರ್ಷದ ಪರಿಶೋಧನಾಕಾರ್ಯದಲ್ಲಿ ಸುಮಾರು ಹತ್ತುಸಾವಿರ ಗಿಡಗಳಿಗಿಂತಲೂ ಹೆಚ್ಚಾಗಿ ಬೆಳೆಸಿದ್ದನು. ಮುನ್ನೂರ ಮುವತ್ತೈದು ಬಟಾಣಿ ಗಿಡಗಳಮೇಲೆ

ಕೃತಕವಾಗಿ ಗರ್ಭಾಂಕುರತೆಗೊಳಿಸುವ ಪ್ರಯೋಗಗಳನ್ನು ನಡೆಸಿದ್ದನು. ಮೇಲಾಗಿ ಹದಿಮೂರು ಸಾವಿರ ಮಿಶ್ರತಳಿಬೀಜ ಗಳನ್ನು ಸಂಗ್ರಹಿಸಿ ಅವುಗಳನ್ನು ಬೆಳೆಸಿ ಅವುಗಳ ಗುಣವಿಶೇಷ ಗಳನ್ನು ಅಧ್ಯಯನ ಮಾಡಿದ್ದನು. ಒಂದು ನಿಯಮಬದ್ಧ ಮತ್ತು ಸಮಗ್ರತೆಯಾದ ಒಂದು ದಾಖಲೆಯನ್ನು ಬರೆದು ಕೊಂಡು ಇಡುತ್ತಿದ್ದನು.

ಮೆಂಡೆಲನು ತಾನು ಕೈಕೊಂಡಿದ್ದ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು ೧೮೬೫ರ ಫೆಬ್ರವರಿ ಮತ್ತು ಮಾರ್ಚಿ ತಿಂಗಳು ಗಳಲ್ಲಿ ಎರಡು ಭಾಷಣಗಳ ಮೂಲಕ ಬ್ರೂಯಿನ್ ಪ್ರಕೃತಿ ವಿಜ್ಞಾನ ಸಂಘದ ಸದಸ್ಯರುಗಳನ್ನುದ್ದೇಶಿಸಿ ವಿಶದೀಕರಿಸಿದನು. ಸಭೆಯಲ್ಲಿ ಹಿರಿಯ ವಿದ್ವಾಂಸರೂ ಹೆಸರಾದ ವಿಜ್ಞಾನಿಗಳೂ ಉಪಸ್ಥಿತರಿದ್ದರು.

ಫೆಬ್ರವರಿ ಎಂಟನೆಯ ತಾರೀಖಿನ ದಿನ, ಮೆಂಡೆಲನು ತಾನು ಬಟಾಣಿ ಗಿಡಗಳ ಮೇಲೆ ನಡೆಸಿದ ತಳಿಮಿಶ್ರಣ ಪ್ರಯೋಗ ಗಳನ್ನು ಕಥೆಯೋಪಾದಿಯಲ್ಲಿ ಒಂದು ಗಂಟೆಗಿಂತಲೂ ಹೆಚ್ಚು ಕಾಲ ವಿವರಿಸಿದನು. ಸಭಿಕರನೇಕರಿಗೆ ಅವನ ಭಾಷಣ ಅರ್ಥ ವಾಗಿರಲೇಬೇಕು. ಆನುವಂಶೀಯತೆಯಲ್ಲಿ ಗುಣಲಕ್ಷಣಗಳು ವ್ಯತ್ಯಾಸ ಹೊಂದದ ಪ್ರಮಾಣದಲ್ಲಿ ಹಂಚಿಹೋಗುವ ವಿವರ ಗಳನ್ನು ಕೇಳಿ ಸಭಾಸದರು ಆಶ್ಚರ್ಯಚಕಿತರಾದರು.

ಭಾಷಣದ ಅಂತ್ಯದಲ್ಲಿ ತಾನು ಮುಂದಿನ ತಿಂಗಳು ತಳಿ ಮಿಶ್ರಣ ಪ್ರಯೋಗ ಪರೀಕ್ಷೆಗಳ ಮುಕ್ತಾಯ ಭಾಷಣವನ್ನು ಮಾಡುವುದಾಗಿ ತಿಳಿಸಿದನು. ಸಾಂಪ್ರದಾಯಕವಾಗಿ ಭಾಷಣದ ಅಂತ್ಯದಲ್ಲಿ ಕೆಲವು ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ವನ್ನು ಕೊಟ್ಟನು. ಅಲ್ಲದೆ ಅಂದು ಆನುವಂಶೀಯತೆಯ

ತಿಳಿವಳಿಕೆಯ ವಿಚಾರದಲ್ಲಿ ವಿಮರ್ಶಾತ್ಮಕ ಚರ್ಚೆಯೂ ಕೂಡ ನಡೆಯಿತು.

ಮಾರ್ಚ್ ತಿಂಗಳು ಎಂಟನೇ ತಾರೀಖು ಸಭೆ ಮತ್ತೆ ಸೇರಿತು. ಮೆಂಡೆಲನು ತನ್ನ ಭಾಷಣದಲ್ಲಿ ಜೀವಶಾಸ್ತ್ರಕ್ಕೆ ಮುಖ್ಯವಾಗಿ ಸಸ್ಯಶಾಸ್ತ್ರಕ್ಕೆ ಗಣಿತಶಾಸ್ತ್ರವು ನೀಡಬಹುದಾದ ಹಿರಿಯ ಕಾಣಿಕೆಯನ್ನು ವಿವರಿಸಿದನು. ಅಂದಿನವರೆಗೂ ವಿಜ್ಞಾನಿಗಳು ಈ ಎರಡು ಶಾಸ್ತ್ರಗಳ ಸಂಪರ್ಕವನ್ನು ಕೇಳಿರಲಿಲ್ಲ. ತಾಳ್ಮೆಯಿಂದ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳಲ್ಲಿ ಸಂಗ್ರಹಿಸಿದ ಅಂಕಿಅಂಶಗಳನ್ನು ಬೀಜಗಣಿತ ಸೂತ್ರಗಳಿಗೆ ಅಳವಡಿಸಿಕೊಂಡು ಆ ಮೂಲಕ ಹೊಸ ಸಿದ್ಧಾಂತ ಮತ್ತು ಆನುವಂಶೀಯತೆಯ ನಿಯಮಗಳನ್ನು ನಿರೂಪಿಸಿದನು. ಪ್ರತಿಯೊಂದು ಜೀವಿಯೂ ಒಂದು ಆನುವಂಶಿಕ ಗುಣವಿಶೇಷಗಳ ಮೊಸೇಕ್ (Mosaic) ಎಂದು ಒತ್ತಿ ಒತ್ತಿ ಹೇಳಿದನು. ಜೀವಿಯಲ್ಲಿ ಗುಣಲಕ್ಷಣಗಳು ಯಾವ ಬಗೆಯ ಜಟಿಲ ರೀತಿಯಲ್ಲಿ ಹೆಣೆದುಕೊಂಡಿದ್ದರೂ ನಿಯಮಬದ್ಧತೆಯಲ್ಲಿ ಬೇರ್ಪಟ್ಟು ಪ್ರತಿಪೀಳಿಗೆಯಲ್ಲಿಯೂ ಹೊಸದಾದ ರೀತಿಯಲ್ಲಿ ರೂಪುಗೊಳ್ಳುವ ಸಂಯತ್ರವನ್ನು (Mechanism) ವಿವರಿಸಿದನು. ಜೀವಶಾಸ್ತ್ರದ ಅಂಗವಾದ ಆನುವಂಶೀಯತೆಯ ಅಧ್ಯಯನಕ್ಕೆ ಗಣಿತಶಾಸ್ತ್ರದ ನೆರವು ಅಥವಾ ನಿಕಟ ಸಂಬಂಧದ ಬಗ್ಗೆ ಸಭೆಯಲ್ಲಿದ್ದ ವೈಜ್ಞಾನಿಕರು ಚಕಿತಗೊಂಡರೇ ವಿನಾ ಮೆಂಡೆಲನ ಭಾಷಣವನ್ನಾಗಲೀ ಅಥವಾ ಅದರ ಸಾರಾಂಶವನ್ನಾಗಲೀ ಅರ್ಥಮಾಡಿಕೊಳ್ಳಲಿಲ್ಲ. ಭಾಷಣದ ಕೊನೆಯಲ್ಲಿ ಸಂಪ್ರದಾಯಕವಾದ ಪ್ರಶ್ನೋತ್ತರಗಳಾಗಲೀ ಅಥವಾ ವಿಮರ್ಶಾತ್ಮಕ ಚರ್ಚೆಯಾಗಲೀ ನಡೆಯಲಿಲ್ಲ. ಸಭ್ಯರೀತಿಯಲ್ಲಿ ಭಾಷಣ ಕೇಳಿ

ಹೊರಗೆ ಬಂದ ಸಭಿಕರಲ್ಲೊಬ್ಬನಾದರೂ ಮೆಂಡೆಲನ ಪ್ರಯೋಗ ಸಿದ್ಧಿ ಮತ್ತು ಸಾಧನೆಯ ಬಗ್ಗೆ ಪ್ರಶಂಸಿಸಲಿಲ್ಲ.

ಮೆಂಡೆಲನಿಗೆ ತನ್ನ ಕಾರ್ಯದಲ್ಲಿ ಅಚಲವಾದ ನಂಬಿಕೆ ಯಿತ್ತು; ಸತ್ಯಾನ್ವೇಷಣೆಯಲ್ಲಿ ದೃಢತೆಯಿತ್ತು; ತಾನು ಸಂಗ್ರ ಹಿಸಿದ ಅಂಕಿಅಂಶಗಳಲ್ಲಿ ನಿಷ್ಠೆಯಿತ್ತು ಮತ್ತು ತಾನು ನಿರೂ ಪಿಸಿದ ಆನುವಂಶೀಯತೆಯ ನಿಯಮಾವಳಿಗಳ ಸೂತ್ರದಲ್ಲಿ ವಿಶ್ವಾಸವಿತ್ತು. ತನ್ನ ಪ್ರಯೋಗ ಪರೀಕ್ಷೆಗಳ ಮಹತ್ವವನ್ನು ಅರಿತು ಅಳೆಯದ ಜನರ ಮಧ್ಯೆ ಮೆಂಡೆಲನಿಗೂ ಜಿಗುಪ್ಸೆ ಯುಂಟಾಗಿರಬೇಕು. ತನ್ನ ಸಂಶೋಧನೆಯ ಬಗ್ಗೆ ಮಾಡಿದ ಎರಡು ಭಾಷಣಗಳು ವಿಜ್ಞಾನಿಗಳಲ್ಲಿ ಯಾವ ಬಗೆಯ ಕುತೂ ಹಲವನ್ನೂ ಕೆರಳಿಸದಿದ್ದುದನ್ನು ಕಂಡು ತುಂಬಾ ನಿರಾಶ ನಾದನು.

ಮೆಂಡೆಲನ ಈ ಎರಡು ಭಾಷಣಗಳು ೧೮೬೬ ರಲ್ಲಿ ಬ್ರೂಯಿನ್ ವಿಜ್ಞಾನಸಂಘದ ನಾಲ್ಕನೆಯ ವಾರ್ಷಿಕವರದಿಯಲ್ಲಿ "ಸಸ್ಯ ಗಳಲ್ಲಿ ತಳಿಮಿಶ್ರಣ ಪ್ರಯೋಗಗಳು" (Versuche über Pflanzenhybriden) ಎಂಬ ಶಿರೋನಾಮೆಯಲ್ಲಿ ಪ್ರಕಟ ವಾದುವು; ಮತ್ತು ಸಂಘದ ಪದ್ಧತಿಯ ಮೇರೆಗೆ ವಾರ್ಷಿಕ ವರದಿಯ ಪ್ರತಿಗಳನ್ನು ತಮ್ಮ ಮತ್ತು ಬೇರೆ ಬೇರೆ ದೇಶದ ವೈಜ್ಞಾನಿಕ ಸಂಘಗಳಿಗೂ ಮತ್ತು ವಿಯನ್ನಾ, ಬರ್ಲಿನ್, ರೋಮ್, ಸೇಂಟ್ ಪೀಟರ್ಸ್ ಬರ್ಗ್, ಉಪ್ಸಾಲ (Upsala) ಮೊದಲಾದ ವಿಶ್ವವಿದ್ಯಾನಿಲಯಗಳಿಗೂ ಕಳುಹಿಸಲಾಗಿತ್ತು. ಮೆಂಡೆಲನೂ ಕೂಡ ನೆಗೇಲಿಯವರೇ ಮೊದಲಾದ ಖ್ಯಾತ ಸಸ್ಯ ಶಾಸ್ತ್ರಜ್ಞರಿಗೂ, ಜೀವ ಶಾಸ್ತ್ರಜ್ಞರಿಗೂ ಮತ್ತು ಮಿತ್ರರಿಗೂ ವರದಿಯ ಪ್ರತಿಗಳನ್ನು ಕಳುಹಿಸಿದ್ದನು. ಇಷ್ಟಾದರೂ ಮೆಂಡೆ

ಲನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳು ಆ ಕಾಲದ ಯಾವ ಜೀವ ವಿಜ್ಞಾನಿಯ ಅಥವಾ ಪ್ರಕೃತಿ ವಿಜ್ಞಾನಿಯ ಗಮನವನ್ನೂ ಸೆಳೆಯಲಿಲ್ಲ. ಮೆಂಡೆಲನ ಪರಿಶೋಧನೆಗಳು ಮತ್ತು ಆನು ವಂಶೀಯತೆಯ ನಿಯಮಗಳು ಮಿಂಚಿನಂತೆ ಕಂಡು ಕಣ್ಮರೆ ಯಾದಂತಾದುವು. ೩೦-೩೫ ವರ್ಷಗಳವರೆಗೂ ಪುಸ್ತಕಾಲಯು ಗಳ ಮೂಲೆಯಲ್ಲಿ ಮುಳುಗಿಹೋದುವು. ಕತ್ತಲೆಯಲ್ಲಿ ಸಮಾಧಿಯಾದುವು.

ಆರೇಳು ವರ್ಷಗಳ ಹಿಂದೆಯೇ, ಅಂದರೆ ೧೮೫೯ರಲ್ಲಿಯೇ ಡಾರ್ವಿನ್ನನ ಜೀವವಿಕಾಸವಾದವು ಯೂರೋಪಿನ ಮೂಲೆ ಮೂಲೆಗೂ ಚಂಡಮಾರುತದಂತೆ ಪ್ರಸರಿಸಿತ್ತು. ಜೀವವಿಜ್ಞಾನಿ ಗಳು ಮತ್ತು ವಿಚಾರವಂತರು ಡಾರ್ವಿನ್ನನ ಹೊಸ ಸಿದ್ಧಾಂತದ ಬಗ್ಗೆ ಚಿಂತನ ಮಂಥನ ಮಾಡುತ್ತಿದ್ದರು. ತಮ್ಮದೇ ಆದ ಹೊಸ ವಿವರಗಳನ್ನು ಕೊಡುವುದರಲ್ಲಿ ಮಗ್ನರಾಗಿದ್ದರು. ಹೊಸ ಬೆಳಕನ್ನು ಕಾಣಬಯಸಿದ ಮೆಂಡೆಲನ ಆನುವಂಶೀಯತೆಯ ನಿಯಮಗಳಿಗೆ, ತತ್ವಗಳಿಗೆ, ಡಾರ್ವಿನ್ ಮತ್ತು ಅವನ ಜೀವ ವಿಕಾಸವಾದವು ಕಾರ್ಮೋಡವಾಗಿ ಪರಿಣಮಿಸಿತೆಂದರೆ ತಪ್ಪಾಗ ಲಾರದು. ಇಂತಹ ಸನ್ನಿವೇಶದಲ್ಲಿ ಹೊಸ ಜ್ಞಾನ ಜ್ಯೋತಿ ಮಂಕಾಗಿಬಿಟ್ಟಿತು. ಮೆಂಡೆಲನ ಮಹತ್ಕಾರ್ಯ ಮರೆತು ಹೋಯಿತು; ಪುಸ್ತಕ ಭಂಡಾರಗಳಲ್ಲಿ ಸಮಾಧಿಯಾಯಿತು.

ಜೀವವಿಕಾಸವನ್ನು ಮೊಟ್ಟಮೊದಲು ಸಮಗ್ರ ದೃಷ್ಟಿಯಲ್ಲಿ ಕಂಡು ಪ್ರಸಾರಮಾಡಿದ ಡಾರ್ವಿನ್ನನಿಗೆ ತನ್ನ ವಾದಕ್ಕೆ ಪೌಷ್ಟಿಕ ವಾದ ಆನುವಂಶೀಯತೆಯ ರೀತಿ ನೀತಿಗಳನ್ನು ಸಮರ್ಪಕವಾಗಿ ವಿವರಿಸುವಷ್ಟು ಸಮರ್ಥನಾಗಿಲ್ಲನೆಂಬುದನ್ನು ಮೆಂಡಲನು ಅರಿತುಕೊಂಡಿದ್ದನು. ಡಾರ್ವಿನ್ನನು ಒಂದು ಮಗುವಿನಲ್ಲಿ ಅಜ್ಜನ

ಅಥವಾ ಅಜ್ಜಿಯ ಇಲ್ಲವೇ ಬಹು ಹಿಂದಿನ ಪೂರ್ವಜರ ಗುಣ ಲಕ್ಷಣಗಳು ಮತ್ತೆ ಏಕೆ ತಲೆದೋರುವುವೆಂಬುದನ್ನು ವಿವರಿಸಲು ಅಸಮರ್ಥನಾಗಿದ್ದನು. ಅವನು ಜೀವರಾಶಿಗಳಲ್ಲಿ ಕಾಣಬರುವ ವಿಚ್ಛಿನ್ನ ವೈವಿಧ್ಯತೆಗಳಿಗೆ(Discontinuous variations) ತೃಪ್ತಿಕರವಾದ ವಿವರಗಳನ್ನು ಕೊಟ್ಟಿರಲಿಲ್ಲ. ಡಾರ್ವಿನ್ನಿನ ಜೀವವಿಕಾಸಕ್ಕೆ ಮೆಂಡೆಲನು ಓಗೊಟ್ಟು ಡಾರ್ವಿನ್ನಿನ ಎಲ್ಲ ಕೃತಿಗಳನ್ನೂ ಸಂಗ್ರಹಿಸಿ ಓದಿ, ಅಧ್ಯಯನಮಾಡಿದ್ದಕ್ಕೆ ತಾನಿದ್ದ ಕ್ರೈಸ್ತ ಮಠದ ಪುಸ್ತಕ ಭಂಡಾರವೇ ಸಾಕ್ಷಿಯಾಗಿದೆ. ಮೇಲಾಗಿ ಮಠದಲ್ಲಿರುವ ಡಾರ್ವಿನ್ನನ ಕೃತಿಗಳಲ್ಲಿ ಮೆಂಡೆಲನು ಸ್ವಹಸ್ತದಿಂದ ಮಾಡಿರುವ ಕೆಲವು ಲಘುಟಿಪ್ಪಣಿಗಳನ್ನು ಕ್ರೈಸ್ತಮಠದ ಪುಸ್ತಕಭಂಡಾರದಲ್ಲಿರುವ ಡಾರ್ವಿನ್ನನ ಪ್ರಕಟಿತ ಪುಸ್ತಕಗಳಲ್ಲಿ ಈಗಲೂ ಕೂಡ ಕಾಣಬಹುದು.

ಡಾರ್ವಿನ್ನನು ಜೀವವಿಕಾಸಕ್ಕೆ ಕೊಟ್ಟ ಎಲ್ಲಾ ಸಿದ್ಧಾಂತಗಳೂ ಸಾಕಷ್ಟಿಲ್ಲವೆಂಬುದು ಮೆಂಡೆಲನಿಗೆ ಅರಿವಾಗಿತ್ತು. ತನ್ನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳು ಮತ್ತು ತಾನು ನಿರೂಪಿಸಿದ ಆನುವಂಶೀಯತೆಯ ನಿಯಮಗಳು ಡಾರ್ವಿನ್ನಿನ ಜೀವ ವಿಕಾಸವಾದಕ್ಕೆ ಸಮರ್ಪಕವಾದ ಅರ್ಥವಿವರಣೆ, ಬೆಂಬಲ ಮತ್ತು ಜೀವಕಳೆಯನ್ನು ಕೊಡುತ್ತಿದ್ದುವೆಂಬುದನ್ನು ದೃಢವಾಗಿ ನಂಬಿದ್ದನು. ಡಾರ್ವಿನ್ನನು ತಾತ್ವಿಕವಾಗಿ ಜೀವ ವಿಕಾಸವನ್ನು ದೃಷ್ಟಾಂತಗಳೊಡನೆ ವಿವರಿಸಿದ್ದರೂ ಮೆಂಡೆಲನು ಪ್ರಾಯೋಗಿಕವಾಗಿ ಜೀವವಿಕಾಸಕ್ಕೆ ನೇರವಾದ ತಿರುಳನ್ನು ಕಂಡುಹಿಡಿದಿದ್ದನು.

ಡಾರ್ವಿನ್ನನಿಗೆ ಮೆಂಡೆಲ್ ಮತ್ತು ಅವನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳ ವಿಚಾರ ತಿಳಿದೇ ಇರಲಿಲ್ಲವೆಂದು

ಕಾಣುತ್ತದೆ. ತಿಳಿದಿದ್ದರೆ ಹೋದ ಶತಮಾನದ ಉತ್ತರಾರ್ಧ ಭಾಗದ ಆದಿಯಲ್ಲಿಯೇ ತನ್ನ ಜೀವವಿಕಾಸ ವಾದವನ್ನು ಸಂಪೂರ್ಣವಾಗಿ ಪುನಾರಾವರ್ತಿಗೊಳಿಸುತ್ತಿದ್ದನು. ಜೀವ ವಿಜ್ಞಾನದ ಇತಿಹಾಸವು ಹೊಸರೂಪು ತಾಳಿ ಮಾರ್ಪಾಟಾ ಗಿರುತಿತ್ತು. ಮೆಂಡೆಲನಿಗೂ ಕೂಡ ತನ್ನ ಜೀವಿತಕಾಲದಲ್ಲಿಯೇ ವಿಜ್ಞಾನ ಪ್ರಗತಿಯ ಇತಿಹಾಸದಲ್ಲಿ ಮಾನ್ಯಸ್ಥಾನ ದೊರೆಯು ತ್ತಿತ್ತು. ಆದರೆ ಇದೆಲ್ಲಾ "ರೆ"ಯ ಪ್ರಸಂಗ!

ಮೆಂಡೆಲನು ಆ ಕಾಲಕ್ಕೆ ಸಸ್ಯಶಾಸ್ತ್ರ ಪರಿಣಿತನೆನಿಸಿಕೊಂಡಿದ್ದ ನೆಗೇಲಿರವರ ಗಮನವನ್ನು ಸೆಳೆಯುಲು ದೀರ್ಘಕಾಲ ಪ್ರಯತ್ನಪಟ್ಟಿದ್ದನು. ೧೮೬೬ರ ವರ್ಷಾಂತ್ಯದಲ್ಲಿ ಒಂದು ದೀರ್ಘವಾದ ಒಂದು ಕಾಗದವನ್ನು ಬಹು ಎಚ್ಚರಿಕೆಯಿಂದ ಬರೆದನು. ತನ್ನ ಪ್ರಬಂಧದ ಪ್ರತಿಯನ್ನೂ ಆ ಕಾಗದದೊಡನೆ ಸೇರಿಸಿ ಕಳುಹಿಸಿದ್ದನು. ಅಲ್ಲದೆ ತಾನು ಪಡೆದ ಪ್ರಯೋಗ ಫಲಿತಾಂಶಗಳನ್ನು ಕೂಲಂಕಷವಾಗಿ ವಿಮರ್ಶಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕೆಂದೂ ಅದಕ್ಕಾಗಿ ಅವರ ಉತ್ತರವನ್ನೇ ನಿರೀಕ್ಷಿಸುತ್ತಿರುವುದಾಗಿಯೂ ಬರೆದಿದ್ದನು. ಹಲವಾರು ತಿಂಗಳ ಮೇಲೆ ಮೆಂಡೆಲನಿಗೆ ನೆಗೇಲಿರವರ ಉತ್ತರ ಬಂತು.

ಈ ಉತ್ತರ ನಿಜವಾಗಿಯೂ ಆಶಾದಾಯಕವಾಗಿರಲಿಲ್ಲ. ಮೆಂಡೆಲನ ಪ್ರಯೋಗ ಪರೀಕ್ಷೆಗಳ ಬಗ್ಗೆ ಒಂದೆರಡು ವಾಕ್ಯ ಗಳಲ್ಲಿ ಮುಗಿಸಿಬಿಟ್ಟಿದ್ದರು. "ನಿನ್ನ ಪ್ರಯೋಗ ಪರೀಕ್ಷೆಯ ಕಾರ್ಯ ನಿಜಕ್ಕೂ ಸಂಪೂರ್ಣವಾಗಿಲ್ಲ. ಅವು ಕೇವಲ ಪ್ರಾರಂಭಿಕ ವಾಗಿವೆ." ಅಲ್ಲದೆ ಬಟಾಣಿ ಮಿಶ್ರತಳಿಬೀಜಗಳನ್ನು ತನಗೆ ಕಳುಹಿಸಿದ್ದಲ್ಲಿ ತಾನೂ ಕೂಡ ಆ ಪ್ರಯೋಗ ಪರೀಕ್ಷೆಗಳನ್ನು

ಪುನರಾವರ್ತಿಗೊಳಿಸುವುದಾಗಿ ತಿಳಿಸಿದರು. ಮತ್ತು ಬೇರೆ ಜಾತಿಯ ಗಿಡದ ಮೇಲೂ ಇದೇ ರೀತಿ ತಳಿಮಿಶ್ರಣ ಕಾರ್ಯಗಳನ್ನು ಮಾಡೆಂದು ಸಲಹೆ ಇತ್ತರು.

ಮೆಂಡೆಲನು ನೆಗೇಲಿರವರ ಉತ್ತರವನ್ನು ಓದಿ, ಕಾಲ ವಿಳಂಬಮಾಡದೆ ತನ್ನಲ್ಲಿದ್ದ ಬಟಾಣಿ ಬೀಜಗಳ ಸುಮಾರು ೧೪೦ ಪೊಟ್ಟಣಗಳನ್ನು ಕಳುಹಿಸಿಕೊಟ್ಟನು. ಈ ಮಿಶ್ರತಳಿ ಬೀಜಗಳನ್ನು ಪಡೆದ ನೆಗೇಲಿರವರು ಮೆಂಡೆಲನು ಸಲಹೆ ನೀಡಿದ್ದಂತೆ ಬಿತ್ತಿ, ಗುಣಲಕ್ಷಣಗಳನ್ನು ಸಂತತಿಯಲ್ಲಿ ಅಧ್ಯಯನಮಾಡಿ, ಅಂಕಿ ಅಂಶಗಳನ್ನು ಸಂಗ್ರಹಿಸಿದ್ದಕ್ಕೆ ಯಾವ ದಾಖಲೆಯೂ ಕಂಡುಬರುವುದಿಲ್ಲ.

ಮೆಂಡೆಲನು ತನ್ನ ಪ್ರಯೋಗಗಳನ್ನು ಬೇರೆ ಜಾತಿಯ ಗಿಡಗಳಮೇಲೆ ಪುನರಾವರ್ತಿಗೊಳಿಸಿ ತಾನು ನಿರೂಪಿಸುವ ನಿಯಮಗಳನ್ನು ಒರೆಗಲ್ಲಿಗೆ ಹಚ್ಚಲು ಪ್ರಯತ್ನಿಸಿದನು. ಸಮಸ್ತ ಜೀವರಾಶಿಗಳಲ್ಲೂ ಇದೇ ನಿಯಮಗಳು ಅನ್ವಯವಾಗುವುವೆಂಬುದೇ ಅವನ ಮುಖ್ಯ ಉದ್ದೇಶ. ಅದಕ್ಕಾಗಿ ಸೂರ್ಯಕಾಂತಿ ಹೂವಿನ ಕುಟುಂಬಕ್ಕೆ ಸೇರಿದ ಹಿರಾಸಿಯಂ (Hieracium) ಎಂಬ ಜಾತಿಯ ಗಿಡ, ಮುಸುಕಿನ ಜೋಳ ಮತ್ತು ಸಂಜೆ ಮಲ್ಲಿಗೆ(Mirabilis) ಗಳನ್ನು ಆರಿಸಿಕೊಂಡು ತನ್ನ ತಳಿಮಿಶ್ರಣ ಕಾರ್ಯವನ್ನು ಪುನರಾವರ್ತಿಗೊಳಿಸಿದನು.

ಹಿರಾಸಿಯಂ ಜಾತಿಯ ಗಿಡದ ಹೂವು ಸಣ್ಣದಾಗಿದ್ದರೂ ಮೆಂಡೆಲನು ತೃಪ್ತಿಕರವಾಗಿ ಕೃತಕ ಪರಕೀಯ ಪರಾಗಾರ್ಪಣೆಗೊಳಿಸಿ ಸಂತಾನವನ್ನು ಪಡೆದನು. ಆದರೆ ಎರಡನೆಯ ತಳಿ ಪೀಳಿಗೆಯಲ್ಲಿ ($F_2$) ತಾನು ನಿರೀಕ್ಷಿಸಿದ ಪ್ರಮಾಣದಲ್ಲಿ ಗಿಡಗಳು ಕಾಣಿಸಿಕೊಳ್ಳಲಿಲ್ಲ. ಗಿಡಗಳೆಲ್ಲವೂ ತಂದೆತಾಯಿ ಪೀಳಿಗೆಯ

ಗಿಡಗಳನ್ನೇ ಹೋಲತಕ್ಕವು! ಏನು? ತಾನು ನಿರೂಪಿಸಿದ ಆನುವಂಶೀಯತೆಯ ನಿಯಮಗಳಿಗೆ ಪರಾಜಯವೇ? ನಿಜ ವಾಗಿಯೂ ಮೆಂಡೆಲನು ಈ ಅಪಜಯದಿಂದ ಖಿನ್ನನಾದನು, ಧೃತಿಗೆಟ್ಟನು.* ಆದರೂ ವಿಜ್ಞಾನ ಪ್ರಪಂಚಕ್ಕೆ ತನ್ನ ಪ್ರಯೋಗ ಪರೀಕ್ಷೆಗಳ ಫಲಿತಾಂಶವನ್ನು ೧೮೬೯ರಲ್ಲಿ ಅದೇ ವಿಜ್ಞಾನ ಸಂಘದ ಎಂಟನೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದನು.

ಮುಸುಕಿನ ಜೋಳ ಮತ್ತು ಸಂಜೆಮಲ್ಲಿಗೆ ಗಿಡಗಳಮೇಲೆ ನಡೆಸಿದ ತಳಿಮಿಶ್ರಣ ಪ್ರಯೋಗಗಳ ಫಲಿತಾಂಶಗಳು ಬಟಾಣಿ ಗಿಡಗಳಲ್ಲಿ ಬಂದ ಫಲಿತಾಂಶಗಳಂತಿದ್ದುವು. ಇದು ನಿಜ ವಾಗಿಯೂ ತನ್ನ ಪ್ರಯೋಗ ಪರೀಕ್ಷೆಗಳನ್ನು ದೃಢೀಕರಿಸುವು ವೆಂದು ನಂಬಿದನು; ಅತ್ಯಾನಂದಪಟ್ಟನು. ಈ ದೃಢೀಕರಣ ಪ್ರಯೋಗ ಪರೀಕ್ಷೆಗಳನ್ನು ಮತ್ತು ಫಲಿತಾಂಶಗಳನ್ನು ನೆಗೇಲಿ ರವರಿಗೆ ೧೮೭೦ನೇ ಜುಲೈ ಮೂರನೇ ತಾರೀಖು ಕಾಗದದ ಮೂಲಕ ತಿಳಿಸಿದನು.

ಮೆಂಡೆಲನ ಮತ್ತೊಂದು ವೈಜ್ಞಾನಿಕ ಕೊಡುಗೆ ಏನೆಂದರೆ ಸಸ್ಯದಲ್ಲಿ ಅಂಡವನ್ನು ಗರ್ಭಾಂಕುರತೆಗೊಳಿಸಲು ಕೇವಲ ಒಂದೇ ಪರಾಗ ರೇಣು ಸಾಕೆಂಬುದು. ಇದರ ಫಲಿತಾಂಶ ಗಳನ್ನು ಕೂಡ ನೆಗೇಲಿಯವರಿಗೆ ೧೮೭೦ರಲ್ಲಿ ಬರೆದ ಕಾಗದದಲ್ಲಿ ತಿಳಿಸಿದ್ದಾನೆ.

---

* ೨೦ನೇ ಶತಮಾನದ ಆದಿಯಲ್ಲಿ ಮೆಂಡೆಲನ ಈ ಸೋಲಿಗೆ ಕಾರಣಗಳು ದೊರೆತವು. ಹಿರಾಸಿಯಂ ಜಾತಿಯ ಗಿಡವು ಪರಾಗಾರ್ಪಣೆ ಯಿಲ್ಲದೆಯೇ ಸಂತಾನ ಬೆಳೆಸುವ ಅಥವಾ ಬೀಜಗಳನ್ನು ಬಿಡುವ ಗಿಡವೆಂದು ಕಂಡುಬಂತು.

## ೪. ಮಠದ ಮುಖ್ಯಾಧಿಕಾರಿಯಾಗಿ

ಆಲ್ಟ್ ಬ್ರೂಯಿನ್ ಕ್ರೈಸ್ತ ಸನ್ಯಾಸಮಠದ ಮುಖ್ಯಾಧಿಕಾರಿಗಳು ಮಾರ್ಚಿ ೧೮೬೮ರಂದು ದೈವಾಧೀನರಾದರು. ಅವರ ಸ್ಥಾನಕ್ಕೆ ಮಾರ್ಚಿ ಮೂವತ್ತನೇ ತಾರೀಖು ಮೆಂಡೆಲನು ಸರ್ವಾನುಮತದಿಂದ ಚುನಾಯಿತನಾದನು. ಆಗ ಅವನಿಗೆ ಕೇವಲ ನಲವತ್ತೇಳು ವರ್ಷ. ನ್ಯಾಯಮೂರ್ತಿಯೂ ಮತ್ತು ಆಸಕ್ತಿ ಮತ್ತು ಚಟುವಟಿಕೆಯಿಂದ ಕೆಲಸಮಾಡುವ ಪ್ರವೃತ್ತಿಯುಳ್ಳವನೂ ಆದ ಮೆಂಡೆಲನನ್ನು ಆಯ್ಕೆಮಾಡಿದ್ದು ಬ್ರೂಯಿನ್ ಪಟ್ಟಣದ ಜನರಿಗೆಲ್ಲಾ ಆನಂದ, ಸಂತೋಷ ಮತ್ತು ತೃಪ್ತಿ. ಅಂತೂ ಇವನು ಮಠಾಧೀಶ್ವರನಾದದ್ದರಿಂದ ಒಂದು ಹೊಸ ಗೌರವವನ್ನು ಸಂಪಾದಿಸಿದಂತಾಯಿತು. ಅಂತೆಯೇ ಅವನ ಕಾರ್ಯಕ್ಷೇತ್ರವು ವಿಸ್ತಾರವಾಯಿತು; ಕರ್ತವ್ಯಗಳು ಹಿರಿದಾದುವು.

ಮೆಂಡೆಲನಿಗೆ ಮಠದ ಕಾರ್ಯಭಾರ ಹೆಚ್ಚಿದುದರಿಂದ ತನ್ನ ವಿದ್ಯಾರ್ಥಿವೃಂದದಿಂದ ದೂರವಿರುವುದು ಮತ್ತು ಉಪಾಧ್ಯಾಯ ವೃತ್ತಿಯನ್ನು ಬಿಡುವುದು ತುಂಬಾ ಕಠಿಣವೆನಿಸಿತು. ಇದು ಅನಿವಾರ್ಯವಾದುದರಿಂದ ತುಂಬಾ ದುಃಖಿತನಾದನು. ಆದರೆ ಮಠದ ಮುಖ್ಯಾಧಿಕಾರಿಯಾಗಿರುವುದರಿಂದ ಬಿಡುವು ಹೆಚ್ಚಾಗಿ ಸಿಗುವುದರ ಕಾರಣ ತನ್ನ ತಳಿಮಿಶ್ರಣ ಸಂಶೋಧನೆ ಕ್ಷೇತ್ರವು ವಿಸ್ತಾರಗೊಳ್ಳುವುದೆಂದು ಆಶಿಸಿದನು. ಮಠದ ತೋಟದ ಹೆಚ್ಚು ಭಾಗ ಅವನ ವಶದಲ್ಲಿದ್ದುದರಿಂದ ಅದು ಸಾಧ್ಯವೆನಿಸಿತ್ತು. ಅಲ್ಲದೆ ಪರಿಶೋಧನೆ ಕಾರ್ಯಗಳು ತ್ವರಿತಗೊಳ್ಳುವುದೆಂದೂ ನಂಬಿದ್ದನು. ಆದರೆ ಅವನ ಅಪಾರವಾದ ಆಶೆ ನಿರಾಶೆಯಾಯಿತು. ಮಠದ ಅಧಿಕಾರಿಯ ಕರ್ತವ್ಯಗಳು ಬಹುವಾಗಿದ್ದುದರಿಂದ ಪರಿಶೋಧನಾ ಕಾರ್ಯದಲ್ಲಿ ಹೆಚ್ಚುಕಾಲ ಕಳೆಯುವಂತಿರಲಿಲ್ಲ.

ಆದರೂ ಮೆಂಡೆಲನು ಮಠದ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿ ತನ್ನ ಬಿಡುವಿನ ಸಮಯದಲ್ಲಿ ತನ್ನ ಬಾಲ್ಯತನದ ಚಟುವಟಿಕೆಯಾದ ಗಿಡಗಳನ್ನು ಕಸಿಮಾಡುವುದರಲ್ಲಿ ಸದಾ ನಿರತನಾಗಿರುತ್ತಿದ್ದನು. ಅದರ ಜತೆಗೆ ಜೇನು ಸಾಕುವುದು ಮತ್ತೊಂದು ಕೆಲಸ. ಅವುಗಳಿಗಾಗಿ ಬಗೆಬಗೆಯ ಹೂಗಿಡಗಳನ್ನು ತೋಟದಲ್ಲಿ ನೆಡಲಾರಂಭಿಸಿದನು. ಅವನ ದೃಷ್ಟಿ ಕೇವಲ ಜೇನುತುಪ್ಪದ ಮೇಲಿರಲಿಲ್ಲ. ಜೇನುನೊಣಗಳ ಸಂಭೋಗಕ್ರಿಯೆ ಮತ್ತು ಅವುಗಳು ಮುಂದೆಗೂಡುವ ಪ್ರವೃತ್ತಿಯನ್ನು ಗಮನಿಸಿ, ಅಧ್ಯಯನಮಾಡಿ, ಆ ನೊಣಗಳ ಎಲ್ಲಾ ಚಟುವಟಿಕೆಯನ್ನೂ ಬರೆದಿಡುತ್ತಿದ್ದನು. ಆದರೆ ಅವನು ಬರೆದಿಟ್ಟಿದ್ದ ಈ ದಾಖಲೆಗಳನೇಕವು ಕಾಲಕ್ರಮೇಣ ನಾಶವಾಗಿ ಹೋಗಿಬಿಟ್ಟುವು.

ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳು ಕುಂಟಿತವಾದರೂ ಮೆಂಡೆಲನು ಮಠದ ಹಣ್ಣುಗಿಡಗಳನ್ನು ವೃದ್ಧಿಪಡಿಸಿ ಉತ್ತಮಗೊಳಿಸಿದನು. ಹಲವಾರು ಹಣ್ಣುಗಿಡಗಳಮೇಲೆ ಕಸಿಮಾಡಿ ಅವುಗಳ ಮೇಲೆ G.M. ಎಂಬ ಎರಡಕ್ಷರಗಳನ್ನುಳ್ಳ ಸಣ್ಣ ಸೀಸದ ಬಿಲ್ಲೆಗಳನ್ನು ಕಟ್ಟಿದನು. ಅಂತಹ ಬಿಲ್ಲೆಗಳನ್ನು ಪಡೆದ ಗಿಡಗಳು ಈಗಲೂ ಆ ಕ್ರೈಸ್ತಮಠದ ಉದ್ಯಾನದಲ್ಲಿ ಸಾಕ್ಷಿಯಾಗಿ ನಿಂತಿವೆ.

ಮೆಂಡೆಲನು ನಿರಾಡಂಬರ ಮತ್ತು ನಿಸ್ಪೃಹ ವ್ಯಕ್ತಿ. ಅತ್ಯಂತ ಜನಾನುರಾಗಿ. ಅವನಿಗೆ ಹೆಚ್ಚು ಹಣ ಸಂಬಳದ ರೂಪದಲ್ಲಿ ಬಂದರೂ ಅದನ್ನು ಇತರರ ಉಪಯೋಗಕ್ಕಾಗಿ ಖರ್ಚು ಮಾಡುತ್ತಿದ್ದನು. ಸ್ನೇಹಿತರನ್ನು ಮನರಂಜನೆಗೊಳಿಸುವುದೆಂದರೆ ಅವನಿಗೆ ತುಂಬಾ ಆನಂದ. ಪ್ರತಿದಿನವೂ

ತನ್ನ ಹಳೆಯ ವಿದ್ಯಾರ್ಥಿಗಳನ್ನೂ ಮತ್ತು ಸ್ನೇಹಿತರನ್ನೂ ಆಹ್ವಾನಿಸಿ ಆದರಿಸಿ ಉಪಚರಿಸುವುದೆಂದರೆ ತುಂಬಾ ಸಂತೋಷ. ಬಡವರಿಗೆ ಉದಾರವಾಗಿ ದಾನಮಾಡುತ್ತಿದ್ದನು. ಇತರರಿಗೆ ಹಣಕೊಡುವಾಗ, ದಾನಮಾಡುವಾಗ, ಬಲಗೈ ಕೊಟ್ಟದ್ದು ಎಡಗೈಗೂ ತಿಳಿಯುತ್ತಿರಲಿಲ್ಲ.

ಹಬ್ಬ ಹುಣ್ಣಿಮೆಗಳಲ್ಲಿ ಊರಿನ ಜನರೆಲ್ಲರನ್ನೂ ಮಠಕ್ಕೆ ಆಹ್ವಾನಿಸುತ್ತಿದ್ದನು. ಕ್ರಿಸ್‌ಮಸ್ ದಿನಗಳನ್ನು ಸಂತೋಷ, ವೈಭವ ಮತ್ತು ವಿಜೃಂಭಣೆಗಳಿಂದ ಆಚರಿಸುವಂತೆ ಪ್ರೋತ್ಸಾಹಿಸುತ್ತಿದ್ದನು. ಕಾರ್ಪಸ್ ಕ್ರಿಸ್ಟಿ (Corpus Christi) ಮತ್ತು ಸೇಂಟ್ ಥಾಮಸ್ (St. Thomas) ದಿನೋತ್ಸವಗಳನ್ನು ಭಕ್ತಿ, ಗೌರವ ಮತ್ತು ವಿಜೃಂಭಣೆಗಳಿಂದ ನೆರವೇರಿಸಲು ಬೆಂಬಲನಾಗುತ್ತಿದ್ದನು. ಈ ದಿನಗಳಲ್ಲೆಲ್ಲಾ ಪುರಜನರು ಮನೆಮಠಗಳನ್ನು, ಬೀದಿ ಕೇರಿಗಳನ್ನು ಶೃಂಗರಿಸಿ ದೀಪಗಳಿಂದ ಅಲಂಕರಿಸುವಂತೆ ಪ್ರೋತ್ಸಾಹಿಸುತ್ತಿದ್ದನು. ಆಗ ನಾಕವೇ ಈ ಲೋಕಕ್ಕೆ ಇಳಿದಂತೆ ಕಾಣುತ್ತಿತ್ತು.

ಮೆಂಡೆಲನು ಸ್ವಭಾವತಃ ಸರಸಪ್ರವೃತ್ತಿಯುಳ್ಳವನು. ಸರಾಸರಿ ಎತ್ತರಕ್ಕಿಂತಲೂ ಸ್ವಲ್ಪ ಕುಳ್ಳಾದ ದೇಹ, ಅಗಲವಾದ ಹಣೆ, ಮುಖದ ತುಂಬಾ ನಗುವನ್ನು ಚೆಲ್ಲುವ ಬಾಯಿ. ಅವನ ಕಣ್ಣುಗಳು ಅತಿ ತೀಕ್ಷ್ಣವಾದುವುಗಳು; ಬೂದು ನೀಲಬಣ್ಣ. ಮುಖದಲ್ಲಿ ವರ್ಚಸ್ಸು ಮತ್ತು ಕಾಂತಿ ಮಿನುಗುತ್ತಿತ್ತು. ಅಂತೂ ಜೀವನದಲ್ಲಿ ಅತ್ಯಂತ ತೃಪ್ತನಾಗಿದ್ದನು. ಆದರೆ ದುಃಖಿಗಳನ್ನು ನೋಡಿ ಕುಸಿದು ಬೀಳುವ ಪ್ರವೃತ್ತಿಯುಳ್ಳವನಾಗಿದ್ದನು. ಆದರೆ ಜೀವಿತದ ಕೊನೆಯ ವರ್ಷಗಳಲ್ಲಿ ತೃಪ್ತಿಗೆ ಬದಲಾಗಿ ಬೇಸರ ಮತ್ತು ಜಿಗುಪ್ಸೆ ಆವರಿಸಿದ್ದುವು.

ಜಗತ್ತು ಸ್ವಭಾವತಃ ಸುಂದರಮಯವೆಂಬುದು ಅವನ ದೃಢ ವಿಶ್ವಾಸ. ಆದರೆ "ಮಾನವನು ಅದರ ಅಂದಗೆಡಿಸುವುದೇ ಅವನ ಮಂತ್ರವಾಗಿದೆ" ಎಂದು ಒಮ್ಮೊಮ್ಮೆ ಭಾವಿಸುತ್ತಿದ್ದನು. ಸೃಷ್ಟಿಕರ್ತನ ಕನಸುಗಳು ನನಸಾಗುವುದರೊಳಗೇ ದುರಾಸೆ ಮತ್ತು ಅತ್ಯಾಸೆಗಳ ಮೂರ್ತಿಯಾದ ಕ್ರೂರಮಾನವನು ಅವುಗಳನ್ನು ಧ್ವಂಸಮಾಡಿಬಿಡುತ್ತಾನೆಂಬ ಅಭಿಪ್ರಾಯಕ್ಕೆ ಬರುತ್ತಿದ್ದನು. "೧೮೬೬ರಲ್ಲಿ ಪ್ರಷ್ಯಾದ ಸೈನಿಕರು ಆಸ್ಟ್ರಿಯಾ-ಹಂಗೇರಿ ಚಕ್ರಾಧಿಪತ್ಯದ ಮೇಲೆ ಧಾಳಿನಡೆಸಿ ನಗರಗಳನ್ನೂ ಹಳ್ಳಿಗಳನ್ನೂ ಧ್ವಂಸಮಾಡಿದರು. ಅನಾಗರಿಕರಂತೆ ಸೈನಿಕ ವೇಶದ ಮಾನವರು ವರ್ತಿಸಿದ್ದು, ಮಾನವೀಯತೆಗೆ ಕಳಂಕ ಪ್ರಾಯವಾಗಿತ್ತು. ದನಕರು, ಕುದುರೆ, ಕುರಿಕೋಳಿ, ದವಸ ಧಾನ್ಯ ಮೇವು—ಎಲ್ಲವನ್ನೂ ಕೊಂಡೊಯ್ದರು. ಅದರ ಫಲವಾಗಿ ಶ್ರೀಮಂತರು ಮತ್ತು ಅನುಕೂಲಸ್ಥರು ನಿರ್ಗತಿಕರಾದರು ಮತ್ತು ಭಿಕ್ಷುಕರಾದರು. ಧಾಳಿಕಾರ ಸೈನಿಕರು ಮನೆ ಮಠಗಳಿಗೆ ನುಗ್ಗಿ ಆಸ್ತಿಯನ್ನು ಕೊಂಡೊಯ್ದರು. ಸೈನಿಕರು ಮನೆಗಳಿಗೆ ನುಗ್ಗಿ ತಾವೇ ಮಾಲೀಕರಂತೆ ವರ್ತಿಸಿದರು ಮತ್ತು ರಾತ್ರಿಯ ವೇಳೆ ಮನೆಯ ನಿಜವಾದ ಮಾಲೀಕರು ಕೊಟ್ಟಿಗೆಯಲ್ಲಿಯೋ ಅಥವಾ ನೆಲದ ಮೇಲೊ ಮಲಗಿಕೊಳ್ಳುವ ಸ್ಥಿತಿಗೆ ಇಳಿಯಬೇಕಾಯಿತು" ಎಂದು ಮೆಂಡೆಲನು ತನ್ನ ಭಾವನಾದ ಲಿಯೊಪೋಲ್ಡ್ ಷ್ನಿಡ್‌ಲೆರ್ (Leopold Schnidler) ನಿಗೆ ಕಾಗದದಲ್ಲಿ ಬರೆದು ತಿಳಿಸಿದನು.

ಕಾಲಕ್ರಮೇಣ ಮೆಂಡೆಲನು ಮೊರೇವಿಯನ್ ಅಡಮಾನ ಬ್ಯಾಂಕಿನ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ ನೇಮಿಸಲ್ಪಟ್ಟನು, ಅನಂತರ ಒಂದೆರಡು ವರ್ಷಗಳಕಾಲ ಅದರ ಅಧ್ಯಕ್ಷನಾಗಿಯೂ ಕೂಡ ಕೆಲಸಮಾಡಿದನು.

ಕ್ರೈಸ್ತಮಠಗಳು ಸಾಮಾನ್ಯವಾಗಿ ಎತ್ತರ ಸ್ಥಳಗಳಲ್ಲಿ ಸ್ಥಾಪಿತವಾಗಿರುವುದರಿಂದ ಅವು ಹವಾಮಾನದ ನಿಲುವೂ ಕೂಡ ಆಗಿದ್ದುವು. ೧೮೭೦ರ ಅಕ್ಟೋಬರ್ ತಿಂಗಳಲ್ಲಿ ಬ್ರೂಯಿನ್ ನಗರದ ಮೇಲೆ ಬೀಸಿದ ಚಂಡಮಾರುತ ಮತ್ತು ಅದರ ಹಾವಳಿಯನ್ನು ಕಣ್ಣು ಮುಂದೆ ನಿಲ್ಲುವಂತೆ ಮೆಂಡೆಲನು ಚಿತ್ರಿಸಿ ಬರೆದಿದ್ದಾನೆ. ಮಠಾಧಿಪತಿಯಾದ ಮೇಲೆ ತನ್ನ ಭೌತಶಾಸ್ತ್ರಜ್ಞಾನವನ್ನು ಉಪಯೋಗಿಸಿಕೊಂಡು ಹವಾಮಾನದ ಅಧ್ಯಯನವನ್ನು ಕೂಡ ಮಾಡಿದ್ದಾನೆ. ಅಲ್ಲದೆ ತನ್ನ ಜೀವಮಾನದ ಕೊನೆಯವರೆಗೂ ಊರಿನ ಹವಾಮಾನವನ್ನು ಬರೆದಿಡುವುದು ಅವನ ದಿನಚರಿಯಾಗಿತ್ತು.

ಈತನ್ಮಧ್ಯೆ ೧೮೭೪ರಲ್ಲಿ ರಾಜ್ಯ ಸರ್ಕಾರವು ಪ್ಯಾರಿಷ್ ಪಾದ್ರಿಗಳ ಸಂಬಳವನ್ನು ಹೆಚ್ಚುಮಾಡಲು ದೇಶದಲ್ಲಿದ್ದ ಎಲ್ಲ ಚರ್ಚುಗಳ ಆಸ್ತಿ ಪಾಸ್ತಿಗಳ ಮೇಲೆ ತೆರಿಗೆಯನ್ನು ವಿಧಿಸಿತು. ಅದರ ವಿಚಾರದಲ್ಲಿ ಒಂದು ಶಾಸನವನ್ನು ಜಾರಿಗೆ ತಂದಿತು. ಮೆಂಡೆಲನು ರಾಜ್ಯಕ್ಕೆ ಹಣದ ಅಗತ್ಯವಿರುವ ಅಂಶವನ್ನು ಒಪ್ಪಿಕೊಂಡು ತಾನೇ ಸ್ವಇಚ್ಛೆಯಿಂದ ಕಾಣಿಕೆಯನ್ನು ಕಳುಹಿಸಲು ಪ್ರಾರಂಭಿಸಿದನು. ಆದರೆ ಈ ನ್ಯಾಯಶಾಸನವು ನ್ಯಾಯಬದ್ಧವಲ್ಲವೆಂದೂ, ಕ್ರಮಬದ್ಧವಲ್ಲವೆಂದೂ ಮತ್ತು ಚರ್ಚುಗಳ ಮೇಲೆ ತೆರಿಗೆ ವಿಧಿಸುವ ಯಾವ ಹಕ್ಕೂ ಮತ್ತು ಅಧಿಕಾರವೂ ಸರ್ಕಾರಕ್ಕೆ ಇಲ್ಲವೆಂದು ಘೋಷಿಸಿ ತೆರಿಗೆಯನ್ನು ಕೊಡಲು ನಿರಾಕರಿಸಿದನು. ಅವನು ಕಳುಹಿಸುತ್ತಿದ್ದ ಕಾಣಿಕೆಯನ್ನು ಸರ್ಕಾರವು ಒಪ್ಪಿಕೊಳ್ಳದೆ ಖಡ್ಡಾಯವಾಗಿ ತೆರಿಗೆ ಕೊಡಬೇಕೆಂದು ಬಲಾತ್ಕಾರಮಾಡಿತು. ವ್ಯಾಜ್ಯವು ಮೆಂಡೆಲನು ಸಾಯುವವರೆಗೂ ಮುಂದುವರೆದು ಅವನ ಆರೋಗ್ಯವು ಕೆಡುವಂತಾಯಿತು.

ಸರ್ಕಾರವೂ ಕೂಡ ಮೆಂಡೆಲನ ಮೇಲೆ ಚತುರೋಪಾಯ ಗಳನ್ನು ಹೂಡಿತು. ಅಧಿಕಾರದಲ್ಲಿ ಬಡ್ತಿಯನ್ನು ಕೊಡು ವುದಾಗಿ ಭರವಸೆ ಕೊಟ್ಟಿತು. ಅದಕ್ಕೆ ಜಗ್ಗದೆ ಹೋದ ಮೇಲೆ ಶಿಕ್ಷಿಸುವುದಾಗಿಯೂ ಬೆದರಿಕೆ ಹಾಕಿತು. ಮೊಂಡು ಮತ್ತು ಹಠ ಸ್ವಭಾವದ ಮೆಂಡೆಲನನ್ನು ಸರ್ಕಾರದ ಅಧಿಕಾರಿಗಳು ಒಪ್ಪಿಸಲು ಅಸಮರ್ಥರಾದರು. ಆಪ್ತಮಿತ್ರರೂ ಕೂಡ ಹಠವನ್ನು ಬಿಡೆಂದು ಬೇಡಿಕೊಂಡರು. ಆದರೆ ಮೆಂಡೆಲನು ತನ್ನ ಸ್ನೇಹಿತರೇ ವಿರೋಧಿಗಳಾಗಿರುವರೆಂದು ಬಗೆದನು. ಈ ಧರ್ಮದ ಹೋರಾಟದಲ್ಲಿ ತಾನೊಬ್ಬನೇ ಏಕಾಂಗಿಯಾಗಿ ಹೋರಾಡುತ್ತಿರುವುದಾಗಿ ಅವನಿಗೆ ಭಾಸವಾಯಿತು. ರಾಜ್ಯ ಸರ್ಕಾರವು ಮೆಂಡೆಲನನ್ನು ನ್ಯಾಯಶಾಸನಗಳಿಗೆ ವಿಧೇಯ ನಾಗಲು ತಿರಸ್ಕರಿಸುವ ಹುಚ್ಚು ಮುದುಕ ಎಂದು ಪರಿಗಣಿಸಿತು.

ಮೆಂಡೆಲನು ಬಾಲ್ಯದಲ್ಲಿ ಎಷ್ಟು ಉತ್ಸಾಹಭರಿತನಾಗಿದ್ದನೋ ಅಷ್ಟೇ ಜೀವಿತದ ಸಂಧ್ಯಾಕಾಲದಲ್ಲಿ ಚಿಂತಾಕ್ರಾಂತನಾಗಿ ಬಿಟ್ಟನು. ಉತ್ಸಾಹ ಮಾಯವಾಯಿತು. ತನ್ನ ಸೋದರ ಅಳಿಯಂದಿರ ಮುಂದೆ ಸರ್ಕಾರವು ತನ್ನನ್ನು ಚಿತ್ರಹಿಂಸೆ ಮಾಡುತ್ತಿರುವುದಾಗಿಯೂ ಮತ್ತು ಹುಚ್ಚನೆಂದು ಪರಿಗಣಿ ಸುತ್ತಿರುವುದಾಗಿಯೂ ಹೇಳಿಕೊಂಡಿದ್ದೂ ಉಂಟು.

ಈ ಧರ್ಮವ್ಯಾಜ್ಯ ಹದಿನಾಲ್ಕು ವರ್ಷಕಾಲ ಮುಂದುವರೆ ಯಿತು. ಇದರಿಂದ ಮೆಂಡೆಲನು ತನ್ನ ಪ್ರಯೋಗ ಪರೀಕ್ಷೆಗಳಿಗೆ ಪೂರ್ಣವಿರಾಮ ಹಾಕಬೇಕಾಯಿತು. ಇಷ್ಟಾದರೂ ಆನು ವಂಶೀಯತೆಯ ಅಧ್ಯಯನದ ಮೇಲಿನ ಅನುರಾಗವು ಕಿಡಿ ಯಾಗಿಯೇ ಉಳಿದಿತ್ತು. ತನ್ನ ಕೊಠಡಿ ಕಿಟಕಿಯ ಬಳಿ

ತಂತಿಯಿಂದ ಹೆಣೆದ ಒಂದು ಪಂಜರದಲ್ಲಿ ಹಲವಾರು ಜೇನು ನೊಣಗಳನ್ನಿಟ್ಟು ನೇತುಹಾಕಿ ಆನುವಂಶೀಯತೆಯನ್ನು ಅಧ್ಯಯನಮಾಡುತ್ತಿದ್ದನು. ಒಮ್ಮೆ ಮೆಂಡೆಲನನ್ನು ಭೇಟಿ ಮಾಡಲು ಬಂದ ಆಗಂತುಕನೊಬ್ಬನು "ಏಕೆ ಕೆಲವು ಜೇನು ಹುಳುಗಳನ್ನು ಬೇರ್ಪಡಿಸಿದ್ದೀರಿ" ಎಂದು ಕೇಳಿದನು. ಅದಕ್ಕೆ ಮೆಂಡೆಲನು "ಅಲ್ಲಿ ಸ್ವಯಂವರವಾಗುತ್ತಿದೆ. ಆ ಪಂಜರದಲ್ಲಿ ಒಂದು ರಾಣಿಯನ್ನು ಮತ್ತು ಕೆಲವು ಗಂಡು ಜೇನು ನೊಣಗಳನ್ನು ಇಟ್ಟಿದ್ದೇನೆ. ರಾಣಿಯು ತನಗೆ ಯೋಗ್ಯನಾದ ಗಂಡನನ್ನು ಆರಿಸಿಕೊಳ್ಳಲಿ ಎಂದು. ಮಾನವನಲ್ಲಾದರೊ ಆಗಾಗ್ಗೆ ನಮ್ಮ ಸಮಾಜದಲ್ಲಿ ಒಳ್ಳೆಯ ಹೆಣ್ಣಿಗೆ ಕೆಟ್ಟ ಗಂಡನ ಸಂಪರ್ಕವೇರ್ಪಡುತ್ತದೆ. ಇದು ನಿಜವಾಗಿಯೂ ದುರದೃಷ್ಟ. ಅಂತಹ ಪ್ರಸಂಗ ಒದಗದಿರಲೆಂದು ಹಲವಾರು ಗಂಡು ನೊಣಗಳನ್ನು ಇಟ್ಟಿದ್ದೇನೆ" ಎಂದು ಹಾಸ್ಯದಿಂದ ಹೇಳಿದನು. ಅಂತೂ ಜೀವನದಲ್ಲಿ ಎಂತಹ ಬರಸಿಡಿಲು ಬಂದರೂ, ಪ್ರಚಂಡ ಪ್ರವಾಹಬಂದರೂ, ಆನುವಂಶೀಯತೆಯ ಅಧ್ಯಯನದಲ್ಲಿ ಅಂತಃಸ್ಫೂರ್ತಿ ನಂದಿಹೋಗಿರಲಿಲ್ಲ. ಜೀವಿತವನ್ನು ಆದಷ್ಟು ಸರಸಮಯವಾಗಿಟ್ಟುಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಿದ್ದನು.

ಚಿಂತಾಕ್ರಾಂತನಾದ ಮೆಂಡೆಲನ ಆರೋಗ್ಯ ಕೆಟ್ಟು ಹೋಯಿತು. ಐದಾರು ವರ್ಷಗಳು ಖಾಯಿಲೆಯಿಂದ ನರಳಿದನು. ೧೮೮೪ರ ಜನವರಿ ನಾಲ್ಕನೆಯ ತಾರೀಖು ಮೂತ್ರಪಿಂಡದ ಖಾಯಿಲೆ ಅಧಿಕವಾಯಿತು. ಎರಡು ದಿನಗಳ ಮೇಲೆ ಹೃದಯಾಘಾತದಿಂದ ಕಣ್ಮುಚ್ಚಿದನು.

೧೮೮೪ರ ಜನವರಿ ಒಂಭತ್ತನೆಯ ತಾರೀಖು ಮೆಂಡೆಲನ

ಶವಸಂಸ್ಕಾರವಾಯಿತು. ಚರ್ಚುಗಳ ಮತ್ತು ರಾಜ್ಯ ಉನ್ನತ ಅಧಿಕಾರಿಗಳೂ, ಸಾವಿರಾರು ಮಂದಿ ವಿದ್ಯಾರ್ಥಿಗಳೂ ಮತ್ತು ಪುರಜನರೂ ಮೆಂಡೆಲನಿಗೆ ಅಂತ್ಯಗೌರವವನ್ನು ಸಲ್ಲಿಸಲು ನೆರೆದಿದ್ದರು. ಅಂದು ಮೆಂಡೆಲನನ್ನು "ಬಡವರ ಬಂಧು", "ವಿದ್ವಾಂಸ", "ನ್ಯಾಯಮೂರ್ತಿ", "ವಿಜ್ಞಾನಿಗಳ ಮಿತ್ರ", "ವಿದ್ಯಾರ್ಥಿವೃಂದದ ಪೂಜ್ಯಗುರು", "ಭೋಧನೆಗಿಂತ ನಡತೆಯನ್ನು ಪ್ರಾಧಾನ್ಯವಾಗಿಟ್ಟುಕೊಂಡಿದ್ದ ಕ್ರೈಸ್ತನ ನಿಜಭಕ್ತ"—ಎಂದು ಮೊದಲಾಗಿ ಗುಣಗಾನ ಮಾಡಿದರೆ ವಿನಾ ಅವನನ್ನು "ವೈಜ್ಞಾನಿಕ ಮಹಾಪುರುಷ", "ಆಧುನಿಕ ತಳಿ ವಿಜ್ಞಾನದ ಪಿತಾಮಹ" ಎಂದು ಯಾರೂ ಕೊಂಡಾಡಲಿಲ್ಲ.

## ೫. ಪುನರುತ್ಥಾನ

ಮೆಂಡೆಲನ ಮಹತ್ವಪೂರ್ಣವಾದ ಆನುವಂಶೀಯತೆಯ ನಿಯಮಗಳು ವೈಜ್ಞಾನಿಕ ಪ್ರಪಂಚದಲ್ಲಿ ಅನಾದರಣೀಯವಾಗಿ, ಅನಾಕರ್ಷಣೀಯವಾಗಿ ಪ್ರಶಂಸೆಗೆ ಪಾತ್ರವಾಗದೆ ಉಳಿಯಲು ಕಾರಣಗಳೇನು? ಡಾರ್ವಿನ್ನನು ಜೀವವಿಕಾಸ ತತ್ವದ ಪಾಂಚಜನ್ಯವು ಮೊಳಗಿದುದರಿಂದಲೇ? ಅಥವಾ ಮೆಂಡೆಲನು ಕೇವಲ ಒಬ್ಬ ಸಾಮಾನ್ಯ ಕ್ರೈಸ್ತಪಾದ್ರಿಯೆಂದೇ? ಎರಡು ಬಾರಿ ಉಪಾಧ್ಯಾಯ ವೃತ್ತಿಯ ಪರೀಕ್ಷೆಯಲ್ಲಿ ಅನುತ್ತೀರ್ಣನಾದ ಸಣ್ಣ ಪ್ರೌಢಶಾಲೆಯ ಸಹೋಪಾಧ್ಯಾಯನೆಂದೇ? ಅಥವಾ ವಿಶ್ವವಿದ್ಯಾನಿಲಯದ ಜೀವಶಾಸ್ತ್ರಜ್ಞನಲ್ಲವೆಂದೇ? ಪರಿಶೋಧನಾ ಕೇಂದ್ರ ಅಥವಾ ವಿಶ್ವವಿದ್ಯಾನಿಲಯಗಳ ಸುಸಜ್ಜಿತ ಪ್ರಯೋಗ ಶಾಲೆಗಳಲ್ಲಿ ತನ್ನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು

ನಡೆಸಲಿಲ್ಲವೆಂದೇ? ಅಥವಾ ಆಗಿನ ಕಾಲದ ಜೀವ ವಿಜ್ಞಾನಿಗಳು ತಮ್ಮ ಪರಿಶೋಧನೆಗಳಿಗೆ ಉಪಯೋಗಿಸುತ್ತಿದ್ದ ಸೂಕ್ಷ್ಮ ದರ್ಶಿಯನ್ನು ಮೆಂಡೆಲನು ಉಪಯೋಗಿಸಲಿಲ್ಲವೆಂದೇ? ಅಥವಾ ಅವನ ಪ್ರಯೋಗ ಪರೀಕ್ಷೆಗಳ ಬಗ್ಗೆ ಬರೆದ ಪ್ರಬಂಧವು ಒಂದು ಗಣನೆಯಿಲ್ಲದ "ವೈಜ್ಞಾನಿಕ ಪತ್ರಿಕೆ"ಯಲ್ಲಿ ಪ್ರಕಟವಾಯಿತೆಂದೇ? ೧೨೦ಕ್ಕಿಂತಲೂ ಹೆಚ್ಚು ವಿವಿಧ ವಿದ್ಯಾ ಸಂಸ್ಥೆಗಳಿಗೆ ಆ "ಪತ್ರಿಕೆ"ಯನ್ನು ಕಳುಹಿಸಲಾಗಿತ್ತಲ್ಲಾ! ಆಗಿನ ಕಾಲಕ್ಕೆ ಹೆಸರಾಂತ ಸಸ್ಯವಿಜ್ಞಾನಿ ನೆಗೇಲಿಯವರಿಗೂ ತನ್ನ ಪ್ರಯೋಗ ಪರೀಕ್ಷೆಗಳನ್ನು ವಿವರವಾಗಿ ಮೆಂಡೆಲನು ಹಲವಾರು ಕಾಗದ ಪತ್ರಗಳಲ್ಲಿ ಕಳುಹಿಸಿದ್ದನಲ್ಲಾ!!

ಎಲ್ಲಕ್ಕಿಂತಲೂ ಹೆಚ್ಚಾಗಿ ಮೆಂಡೆಲನ ಜೀವಿತದಲ್ಲಿಯೇ ಅವನ ಮಹತ್ಕಾರ್ಯದ ಪರಿಚಯ ಕೆಲವು ವೈಜ್ಞಾನಿಕ ಗ್ರಂಥಗಳಲ್ಲಿ ಕಂಡುಬರುತ್ತದೆಯಲ್ಲಾ! ಜರ್ಮನ್ ಸಸ್ಯಶಾಸ್ತ್ರಜ್ಞ ಹೆರ್ಮನ್ ಹೋಫ್‌ಮನ್ (Hermann Hoffman)ನು ೧೮೬೯ರಲ್ಲಿ ಪ್ರಕಟಿಸಿದ ಗ್ರಂಥದಲ್ಲಿ ಮೆಂಡೆಲನ ಪ್ರಯೋಗ ಪರೀಕ್ಷೆಗಳ ಪರಿಚಯವಿದೆ. ಮತ್ತೊಬ್ಬ ಆನುವಂಶೀಯತೆಯ ಸಮಸ್ಯೆಗಳಲ್ಲಿ ಮಗ್ನನಾಗಿದ್ದ ಫೋಕೆ (W. O Focke)ಯು ೧೮೮೧ರಲ್ಲಿ ಪ್ರಕಟಿಸಿದ "ಸಸ್ಯದ ಮಿಶ್ರತಳಿಗಳು" (Die Pflanzenmischlinge) ಎಂಬ ಗ್ರಂಥದಲ್ಲಿ ಹಲವಾರು ಕಡೆ ಮೆಂಡೆಲನ ಪ್ರಯೋಗಗಳನ್ನು ಉಲ್ಲೇಖಿಸಿದ್ದಾನೆ ಮತ್ತು ನೆನೆದಿದ್ದಾನೆ. ಇವರಿಬ್ಬರಲ್ಲಿ ಒಬ್ಬನಾದರೂ ಮೆಂಡೆಲನ ಪ್ರಯೋಗ ಪರೀಕ್ಷೆಗಳನ್ನು ಅರ್ಥಮಾಡಿಕೊಂಡು ಆನುವಂಶೀಯತೆಯ ನಿಯಮಗಳಿಗೆ ಮಾನ್ಯತೆ ಕೊಡಬಾರದಾಗಿತ್ತೇ?

ಮೆಂಡೆಲನ ಪಾರ್ಥಿವ ಶರೀರ ಹೇಗೆ ಮಣ್ಣಿನಲ್ಲಿ ಮುಳುಗಿ ಹೋಯಿತೋ, ಅಂತೆಯೇ ಅವನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳು ಇಹಲೋಕದ ಮರೆವಿನಲ್ಲಿ, ಅಜ್ಞಾನದಲ್ಲಿ ಮುಳುಗಿ ಹೋದುವು; ಸಮಾಧಿ ಸೇರಿದುವು. ಆದರೆ ಹತ್ತೊಂಭತ್ತನೆಯ ಶತಮಾನವು ಅಸ್ತಮಯವಾಗುವಂತೆಯೇ ಮೆಂಡೆಲನ ಆನುವಂಶೀಯತೆಯ ನಿಯಮಗಳನ್ನು ಸಮಾಧಿಯಿಂದ ಹೊರಗೆ ತೆಗೆದು ಪುನರುಜ್ಜೀವನಗೊಳಿಸಿದ್ದು ನಾಟಕೀಯವೂ ಅಹುದು, ವಿಸ್ಮಯಕಾರಿಯೂ ಹೌದು. ಮೆಂಡೆಲನೂ ಕೂಡ ಪುನರ್ ಜೀವಿತನಾದನು.

ಯೂರೋಪಿನ ಮೂರು ಬೇರೆ ಬೇರೆ ದೇಶಗಳಲ್ಲಿ ಯಾವ ಬಗೆಯ ಪರಸ್ಪರ ಸಂಪರ್ಕವೂ ಇಲ್ಲದೆ ಆನುವಂಶೀಯತೆಯ ಅಧ್ಯಯನದಲ್ಲಿ ಮಗ್ನರಾಗಿದ್ದ ಮೂವರು ಜೀವ ವಿಜ್ಞಾನಿಗಳು, ಮೆಂಡೆಲನು ಕಂಡ ಆನುವಂಶೀಯತೆಯ ನಿಯಮಗಳನ್ನೇ ಕಂಡುಹಿಡಿದರು. ಇವರ ವೈಜ್ಞಾನಿಕ ಪ್ರಕಟಣೆಗಳು ತ್ವರಿತಾನುಕ್ರಮವಾಗಿ "Comptes Rendus" ಎಂಬ ವೈಜ್ಞಾನಿಕ ಪತ್ರಿಕೆಯಲ್ಲಿ ಹೊರಬಂದುವು. ಆದರೆ ಅವರು ನಿರೂಪಿಸಿದ ನಿಯಮಗಳು ೩೪ ವರ್ಷಗಳ ಹಿಂದೆ ಪ್ರಕಟವಾಗಿದ್ದ ಮೆಂಡೆಲನ ನಿಯಮಗಳಂತೆಯೇ ಇದ್ದುದರಿಂದ ಮೆಂಡೆಲನಿಗೆ ಮಾನ್ಯತೆ ಕೊಟ್ಟರು.

ವಿಕೃತಿವಾದ (Mutation Theory) ದ ಮೂಲಪುರುಷ ಹಾಲೆಂಡ್ ದೇಶದ ಹ್ಯೂಗೋ ಡಿ ವ್ರೀಸ್ (Hugo De Vries)ನು ೧೯೦೦ನೆ ಮಾರ್ಚಿ ತಿಂಗಳಲ್ಲಿ ತನ್ನ ಆನುವಂಶೀಯತೆಯ ಪರಿಶೋಧನೆಗಳನ್ನು ಪ್ರಕಟಿಸಿದನು. ಏಪ್ರಿಲ್ ತಿಂಗಳಲ್ಲಿ ನೆಗೇಲಿಯುವರ ವಿದ್ಯಾರ್ಥಿಗಳಲ್ಲೊಬ್ಬನಾದ ಜರ್ಮ

ನಿಯ ಕಾರ್ಲ್ ಕೊರೆನ್ಸ್ (Carl Correns)ನ ವೈಜ್ಞಾನಿಕ ಪ್ರಬಂಧವು ಪ್ರಕಟವಾಯಿತು. ಅದೇ ವರ್ಷ ಜೂನ್ ತಿಂಗಳಲ್ಲಿ ಆಸ್ಟ್ರಿಯಾ ದೇಶದ ಎರಿಕ್ ಷೆರ್‌ಮಾಕ್ (Erich Tschermak)ನ ಪರಿಶೋಧನೆಗಳೂ ಬೆಳಕಿಗೆ ಬಂದುವು.

ಮೆಂಡೆಲನ ಜೀವಿತಕಾಲದಲ್ಲಿಯೇ ತಳಿಮಿಶ್ರಣದ ಪ್ರಯೋಗ ಮತ್ತು ಆನುವಂಶೀಯತೆಯ ನಿಯಮಗಳಿಗೆ ಬೆಲೆ ಬಾರದೆ ಮೂವತ್ತು ನಾಲ್ಕು ವರ್ಷಗಳನಂತರ ಮನ್ನಣೆ ಮತ್ತು ಪ್ರಶಂಸೆ ದೊರೆಯಲು ಕಾರಣವೇನು? ಕಳೆದ ಶತಮಾನದ ಕೊನೆಯ ಮೂರು ದಶಕಗಳಲ್ಲಿಯ ಜೀವವಿಜ್ಞಾನದ ಪ್ರಗತಿ ಕಾರಣವಾಗಿರಬೇಕಲ್ಲವೇ? ಅದು ನಿಜ. ಆ ಕಾಲದಲ್ಲಿಯೇ ಭ್ರೂಣಶಾಸ್ತ್ರ (Embryology) ಮತ್ತು ಜೀವಕೋಶಶಾಸ್ತ್ರ (Cytology)ದ ಹಲವಾರು ಸಮಸ್ಯೆಗಳು—ಮುಖ್ಯವಾಗಿ ಜೀವ ಕೋಶ ವಿಭಜನೆಗಳು (Cell Divisions: Mitosis and Meiosis), ಕ್ರೋಮೋಸೋಮುಗಳು (Chromosomes), ಲಿಂಗಕೋಶಿಕಗಳ ಉತ್ಪತ್ತಿ (Origin of Sexcells), ಗರ್ಭಾಂಕುರತೆ (Fertilization)—ಸಮರ್ಪಕವಾಗಿ ಬಗೆ ಹರಿಸಲ್ಪಟ್ಟು ಹೊಸ ಬೆಳಕನ್ನು ಚೆಲ್ಲಿದುವು ಮತ್ತು ಹೊಸ ಹೊಸ ದಾರಿಯನ್ನು ನಿರ್ಮಿಸಿದುವು. ಆನುವಂಶೀಯತೆಯಲ್ಲಿ ಕ್ರೊಮೋಸೋಮುಗಳ ಪ್ರಧಾನ ಪಾತ್ರವನ್ನು ಅರ್ಥಮಾಡಿ ಕೊಳ್ಳಲಾಯಿತು. ಈ ಪ್ರಗತಿಯ ಪೂರ್ಣಪರಿಚಯದ ಹಿನ್ನೆಲೆಯ ಬೆಳಕಿನಲ್ಲಿ ಮೆಂಡೆಲನ ಆನುವಂಶೀಯತೆಯ ನಿಯಮಗಳು ಎಷ್ಟರಮಟ್ಟಿಗೆ ಸರ್ವಸತ್ಯವೆಂಬುದು ನಮಗೆ ಅರಿವಾಗುತ್ತದೆ. ವಿಖ್ಯಾತ ತಳಿಶಾಸ್ತ್ರಜ್ಞ ನೋಬೆಲ್ ಬಹು ಮಾನವನ್ನು ಪಡೆದಿರುವ ಮುಲ್ಲರ್ (H. J. Muller) ಹೇಳುವ

"Mendel was ahead of his time" ಎಂಬ ವಾಕ್ಯದಲ್ಲಿ ಸತ್ಯವೂ ಇದೇ; ಅದು ಸಮಂಜಸವೂ ಆಗಿದೆ.

೧೯೦೦ರಲ್ಲಿ ಮೆಂಡೆಲನ ಮಹತ್ಕಾರ್ಯವನ್ನು ನೆನೆದು ವೈಜ್ಞಾನಿಕರು ಅವನ ಕೇವಲ ಎರಡು ಮಹಾಪ್ರಬಂಧಗಳನ್ನು* ಪುನರ್ ಮುದ್ರಿಸಿ ದೇಶವಿದೇಶಗಳ ಪುಸ್ತಕ ಭಂಡಾರಗಳಿಗೂ ಸಂಶೋಧನಾಲಯಗಳಿಗೂ ಹಂಚಿದರು. ೧೮೬೬ ರಲ್ಲಿ ಪ್ರಕಟ ವಾದ ಮಹಾ ಪ್ರಬಂಧವು ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆ ಗಳಿಗೆ ಭಾಷಾಂತರವಾಯಿತು. ಮೂಸೆಯಲ್ಲಿ ಪುಟವಿಟ್ಟ ಚಿನ್ನ ದಂತಾಯಿತು. ಅದರಿಂದ ಜೀವವಿಜ್ಞಾನ ಪ್ರಪಂಚದಲ್ಲಿಯೇ ಕ್ರಾಂತಿಯೆಬ್ಬಿತು. ಹೊಸ ಹೊಸ ಮತ್ತು ಲಾಭದಾಯಕವಾದ ಹೆದ್ದಾರಿಯುಗಳು ತೆರೆಯಲ್ಪಟ್ಟುವು.

ಬ್ರೂಯಿನ್ ಪಟ್ಟಣದ ಪೌರರು ಮೆಂಡೆಲನ ಪೂರ್ಣ ಪ್ರತಿಭೆಯನ್ನು ಪರಿಗಣಿಸಿ ಅವನಿಗೊಂದು ಅಮೃತಶಿಲೆಯ ಸ್ಮಾರಕವೊಂದನ್ನು ಸ್ಥಾಪಿಸಲು ಪ್ರಯತ್ನಿಸಿದರು. ಅದ ಕ್ಕಾಗಿ ಹಣ ತಾನಾಗಿಯೇ ಹರಿದುಬಂತು. ಹಲವಾರು ಭಾಷಣ ಗಳಿಂದ ಮೆಂಡೆಲನನ್ನು ವೈಜ್ಞಾನಿಕರು ಮುಕ್ತಕಂಠದಿಂದ ಕೊಂಡಾಡಿದರು. ವಿಶ್ವವಿಖ್ಯಾತ ವಿಜ್ಞಾನಿಗಳ ಶ್ರೇಣಿಯಲ್ಲಿ ಅವನಿಗೆ ಸ್ಥಾನ ದೊರಕಿತು. ೧೯೧೧ರಲ್ಲಿ ಬಟಾಣಿ ಗಿಡಗಳ ಹಿನ್ನಲೆಯುನ್ನುಳ್ಳ ಒಂದು ಸುಂದರವೂ ಮತ್ತು ಶಾಂತವೂ ಆದ ಮೆಂಡೆಲನ ಶ್ವೇತ ಶಿಲಾಮೂರ್ತಿಯನ್ನು ಅವನು ಬಟಾಣಿ

---

* 1) "Versuche über Pflanzenhybriden" Verhandlungen des Naturforschenden Vereins in Brünn. Vol. 4.(1866).

2) "Über einige aus künstlichen Befruchtung gewonnen Hieracium Bestrade *Ibid.* Vol. 8. (1870).

ಗಿಡಗಳ ಮೇಲೆ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳನ್ನು ನಡೆಸಿದ ಕ್ರೈಸ್ತ ಸನ್ಯಾಸ ಮಠದ ತೋಟದಲ್ಲಿ ನಿಲ್ಲಿಸಲಾಯಿತು.

ಇಪ್ಪತ್ತನೆಯ ಶತಮಾನವು ಅರುಣೋದಯವಾದಂದಿನಿಂದ ಇಂದಿನವರೆಗೂ ತಳಿ ವಿಜ್ಞಾನದ ಪ್ರಗತಿಯು ಬಹುಮುಖವಾಗಿ ತೀವ್ರಗತಿಯಲ್ಲಿ ಸಾಗಿದೆ. ಮಾನವನ ಕಲ್ಯಾಣಕ್ಕೆ ಅಳೆಯಲಾರದಷ್ಟು ಉಪಕಾರವಾಗಿದೆ; ಅಪಾರ ಸೇವೆ ಸಂದಿದೆ. ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗೆ ಹೆಚ್ಚು ನೆರವಾಗಿದೆ.

ಮೆಂಡೆಲನು ವಿಜ್ಞಾನ ಪ್ರಪಂಚಕ್ಕೆ ಕೊಟ್ಟ ಕೊಡುಗೆ ಪರಿಮಾಣದಲ್ಲಿ ಕಿರಿದಾದರೂ, ಉತ್ಕೃಷ್ಟತೆಯಲ್ಲಿ ಅದು ಅತ್ಯಂತ ಹಿರಿದಾದ ಕಾಣಿಕೆ. ತನ್ನ ತಳಿಮಿಶ್ರಣ ಪ್ರಯೋಗ ಪರೀಕ್ಷೆಗಳಿಗೆ ಗಣಿತಶಾಸ್ತ್ರದ ಸಂಭವನೀಯತೆಯ ತತ್ವ (Theory of Probability)ಗಳನ್ನು ಮೊಟ್ಟಮೊದಲಿಗೆ ಜೀವಶಾಸ್ತ್ರದ ಅಧ್ಯಯನದಲ್ಲಿ ಅಳವಡಿಸಿಕೊಂಡು ವಿನೂತನ ವಿಶ್ಲೇಷಣೆಗಳ ಮಾರ್ಗದರ್ಶಕನಾಗಿದ್ದಾನೆ. ಆಧುನಿಕ ತಳಿವಿಜ್ಞಾನದ 'ಪಿತಾಮಹ'ನಾಗಿ ಅಮರಕೀರ್ತಿ ಸಂಪಾದಿಸಿ ವಿಜ್ಞಾನ ಪ್ರಪಂಚದಲ್ಲಿ ಧ್ರುವತಾರೆಯಾಗಿದ್ದಾನೆ.

ಅಂತಹ ಮಹಾವ್ಯಕ್ತಿಯನ್ನು ಎಷ್ಟೊಂದು ನೆನೆದರೂ ಸಾಲದು. ಅವನ ನೆನಪೇ ಆದರ್ಶಗಳನ್ನು ಸಫಲಗೊಳಿಸುವ ಸಾಧನ. ಹ್ಯೂಗೋ ಇಲ್ಟಿಸ್(Hugo Iltis)ನು ಮೆಂಡೆಲನ ಬಗ್ಗೆ ಶ್ಲಾಘಿಸುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು ಸೂಕ್ತ. "ಈ ಶತಮಾನದ ಆದಿಭಾಗದಿಂದ ನಡೆದಿರುವ ಪರಿಶೋಧನೆಯ ಪ್ರಗತಿ ಅಮೃತಶಿಲೆ ಅಥವಾ ಕಂಚಿನ ಸ್ಮಾರಕಕ್ಕಿಂತಲೂ

ಶ್ರೇಷ್ಟವಾದ ಮತ್ತು ಶಾಶ್ವತವಾದ ಸ್ಮಾರಕವನ್ನು ಮೆಂಡೆಲನಿಗಾಗಿ ದೊರಕಿಸಿಕೊಟ್ಟಿದೆ"*

* "The Progress of research since the beginning of this century has built for Mendel a monument more durable and more imposing than any monument of morable or bronze......"

## ೬. ಗ್ರಂಥಋಣ

*Dunn, L. C.*, (Ed). Genetics in the 20th Century. The Macmillan, New York, (1951).

*Iltis, H.*, Life of Mendel, W. W. Norten and Co., New York. (1932).

*Eichling, C. W.*, I talked with Mendel. *J. of Heredity*. Vol. 33, page 243–246. (1942).

*Sinnot, E. W.*, *Dunn, L. C.* and *Dobzhansky, T.*, Principles of Genetics. Mc-Graw-Hill, New York. (1958).

*Sootin, H.*, Gregor Mendel, Father of Science of Genetics. Vanguard Press, Inc., New York. (1958).

*Stern*, C., (Ed) The Birth of Genetics. Supplement to *Genetics*. Vol. 35, page 1-47 (1950).

WO 3045—MUPM—3,000—6-5-65

# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕಮಾಲೆ

೧ ಖಗೋಳಶಾಸ್ತ್ರ ಪ್ರವೇಶ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೨ ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್
೩ ತೆರಿಗೆ—ಬಿ. ಆರ್. ಸುಬ್ಬರಾವ್
೪ ನವರತ್ನಗಳು—ಎಚ್. ಸುಬ್ಬಾಜೋಯಿಸ್
೫ ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ
೬ ಕುಮಾರವ್ಯಾಸ—ಎಸ್. ವಿ. ರಂಗಣ್ಣ
೭ ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೮ ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೯ ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
೧೦ ಪಂಪ—ತೀ. ನಂ. ಶ್ರೀಕಂಠಯ್ಯ
೧೧ ಪ್ರಾಣಿಜೀವನ—ಎ. ನಾರಾಯಣರಾವ್
೧೨ ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ
೧೩ ಮದುವೆ—ನಾ. ಕಸ್ತೂರಿ
೧೪ ನಮ್ಮ ಆರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
೧೫ ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್
೧೬ ಬೆಳಕು—ಟಿ. ಎಸ್. ಸುಬ್ಬರಾಯ
೧೭ ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ
೧೮ ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೧೯ ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್
೨೦ ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ
೨೧ ಸಾರ್ವಜನಿಕ ವೈದ್ಯ—ಡಾ॥ ಎಂ. ಎಚ್. ಗೋಪಾಲ್
೨೨ ಶಿಶುವಿಹಾರಗಳು—ಸಿ. ರಂಗಾಚಾರ್
೨೩ ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ
೨೪ ವಿಡಂಬನ—ಎಸ್. ವಿ. ರಂಗಣ್ಣ
೨೫ ಎಲ್ಲೋರ ಮತ್ತು ಅಜಂತ—ಡಾ॥ ಎಂ. ಎಚ್. ಕೃಷ್ಣ

೨೬ ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್
೨೭ ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೨೮ ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ
೨೯ ಸರ್ವಜ ಕವಿ—ಎ. ಆರ್. ಕೃಷ್ಣಶಾಸ್ತ್ರೀ
೩೦ ರಕ್ತ—ಡಿ. ಶಾಮಣ್ಣ
೩೧ ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೩೨ ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೩೩ ಗಣಿತಶಾಸ್ತ್ರದ ಸ್ವರೂಪ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೩೪ ಋಗ್ವೇದ—ಎಂ. ಎ. ಕೃಷ್ಣಸ್ವಾಮಿ
೩೫ ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೩೬ ಆಳ್ವಾರುಗಳು—ಎಂ. ಯಾಮುನಾಚಾರ್ಯ
೩೭ ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು
—ವಿ. ರಾಘವೇಂದ್ರರಾವ್
೩೮ ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ
೩೯ ಮಕ್ಕಳ ಭಾವಜೀವನ—ಡಾ॥ ಬಿ. ಕುಪ್ಪುಸ್ವಾಮಿನಾಯಿಡು
೪೦ ಸಹಕಾರ—ಎಸ್. ಗೋಪಾಲಸ್ವಾಮಿ
೪೧ ನಯಸೇನ—ಜಿ. ವೆಂಕಟಸುಬ್ಬಯ್ಯ
೪೨ ಕೌಟಿಲ್ಯ—ಡಾ॥ ಎಂ. ವಿ. ಕೃಷ್ಣರಾವ್
೪೩ ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೪೪ ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್
೪೫ ಲಕ್ಷ್ಮೀಶ—ಎನ್. ಅನಂತರಂಗಾಚಾರ್
೪೬ ರುಚಿ—ಎಸ್. ವಿ. ರಂಗಣ್ಣ
೪೭ ಕೀಟಗಳು—ಡಿ. ಎಸ್. ವೀರಯ್ಯ
೪೮ ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್
೪೯ ಮುದ್ರಣ—ಟಿ. ಎಸ್. ಶಾಮರಾವ್
೫೦ ಐವರು ಭೌತ ವೈಜ್ಞಾನಿಕರು—ಬಿ. ಎ. ಕೃಷ್ಣಸ್ವಾಮಿರಾವ್
೫೧ ಕೃತಕರೇಷ್ಮೆ—ಎಂ. ಷಡಕ್ಷರಸ್ವಾಮಿ
೫೨ ಚೀನರ ಇತಿಹಾಸ ಮತ್ತು ನಾಗರಿಕತೆ
—ಎಸ್. ವೆಂಕಟದೇಶಿಕಾಚಾರ್

೫೩ ಯುದ್ಧಕಾಲದ ಆರ್ಥಿಕ ಸಮಸ್ಯೆಗಳು
—ಎಸ್. ಲಕ್ಷ್ಮೀನರಸಿಂಹನ್

೫೪ ಆಹಾರ—ಜೆ. ಆರ್. ಲಕ್ಷ್ಮಣರಾವ್.

೫೫ ಇಬ್ಸನ್ನಿನ ಕೆಲವು ನಾಟಕಗಳು—ಎಸ್. ಮಂಜುನಾಥ್

೫೬ ಶಬ್ದಪ್ರಪಂಚ—ಆರ್. ಎಲ್. ನರಸಿಂಹಯ್ಯ

೫೭ ಪ್ರಜಾಭಿಪ್ರಾಯ—ಟಿ.ಎಸ್. ರಾಜಗೋಪಾಲ ಅಯ್ಯಂಗಾರ್

೫೮ ಕಲ್ಲಿದ್ದಲು—ಕೆ. ಎಸ್. ಲಕ್ಷ್ಮಣರಾವ್

೫೯ ಜನಪದಮುಕ್ತಕಗಳು-ಎಚ್.ಎಂ. ಶಂಕರನಾರಾಯಣರಾವ್

೬೦ ಹಾಲು—ಕೆ. ಎಸ್. ಲಕ್ಷ್ಮಣರಾವ್

೬೧ ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ

೬೨ ಭಾರತದಲ್ಲಿ ಪ್ರಜಾಪ್ರಭುತ್ವ
—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್

೬೩ ಆರೋಗ್ಯಸಾಧನೆ—ಮೋಟಗಾನಹಳ್ಳಿ ಮಹದೇವಶಾಸ್ತ್ರೀ

೬೪–೬೫ ಆಧುನಿಕ ಭಾರತದಲ್ಲಿ ನೃತ್ಯಕಲೆ—ಯು. ಎಸ್. ಕೃಷ್ಣರಾವ್
ಮತ್ತು ಚಂದ್ರಭಾಗಾದೇವಿ

ಸಾದಾ ಪ್ರತಿ ೫೦ ಪೈಸೆ ; ಉತ್ತಮ ಪ್ರತಿ ೭೫ ಪೈಸೆ

೬೬ ಚುನಾವಣೆಗಳು—ಗ. ಸ. ಹಾಲಪ್ಪ

೬೭ ಮೀನಿನಿಂದ ಮಾನವನೆಡೆಗೆ—ಎಚ್. ಬಿ. ದೇವರಾಜ ಸರ್ಕಾರ್

೬೮ ಕ್ಷಯ—ಡಾ॥ ಎಸ್. ಟಿ. ಪುಟ್ಟಣ್ಣ

೬೯ ಶಿಲ್ಪಿಯ ಪಾತ್ರ—ಬಿ. ಎಲ್. ಸಿ. ರಾಜನ್

೭೦ ಪರತಂತ್ರ ಜೀವಿಗಳು ಮತ್ತು ಪರತಂತ್ರ ಜೀವನ
—ಎಚ್. ಬಿ. ದೇವರಾಜ ಸರ್ಕಾರ್

೭೧ ಮಾನವ ಹಕ್ಕುಗಳು—ಹೆಚ್. ಎಂ. ಸದಾಶಿವಯ್ಯ

೭೨ ವಿನೋದ ಗಣಿತ—ವಿ. ಕೆ. ದೊರೆಸ್ವಾಮಿ

೭೩ ಸಾಬೂನು—ಕೆ. ಎಸ್. ಲಕ್ಷ್ಮಣರಾವ್

೭೪ ಉಷ್ಣಯಂತ್ರಗಳ ಪರಿಚಯ—ಕೆ. ವಿ. ಸುಬ್ಬರಾಯ

೭೫ ಬಟ್ಟೆಗಳ ವೈಜ್ಞಾನಿಕ ಪರೀಕ್ಷೆ—ಶ್ರೀ ನಾಗಭೂಷಣ

೭೬ ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ

೭೭ ಜೇನು—ಡಿ. ಎಸ್. ಮುರಿಗಪ್ಪ ಶ್ರೇಷ್ಠಿ
೭೮ ಮಾನವಶಾಸ್ತ್ರ—ಡಾ॥ ಕೆ. ಎನ್. ವೆಂಕಟರಾಯಪ್ಪ
೭೯ ಅಥರ್ವವೇದ—ಸಿ. ಜಿ. ಪುರುಷೋತ್ತಮ
೮೦ ನೇಮಿಚಂದ್ರ—ಎನ್. ಅನಂತರಂಗಾಚಾರ್
೮೧-೮೨ ಹಾಸ್ಯ—ಎಸ್. ವಿ. ರಂಗಣ್ಣ
೮೩ ಶ್ರೀನಾಥ—ಕೆ. ವೆಂಕಟರಾಮಪ್ಪ
೮೪ ಷಡಕ್ಷರದೇವ—ದೇ. ಜವರೇಗೌಡ
೮೫ ಚಿತ್ರಾಂಗದಾ—ಯು. ಕೆ. ಸುಬ್ಬರಾಯಾಚಾರ್
೮೬ ಸಂಚಿಯ ಹೊನ್ನಮ್ಮ

—ಎಚ್. ಎಂ. ಶಂಕರನಾರಾಯಣರಾವ್

೮೭ ವಾಲ್ಮೀಕಿ ರಾಮಾಯಣ—ಯು. ಕೆ. ಸುಬ್ಬರಾಯಾಚಾರ್
೮೮ ಜಪಾನರ ಇತಿಹಾಸ ಮತ್ತು ನಾಗರಿಕತೆ—ಕೆ. ಪದ್ಮಾವತಮ್ಮ
೮೯ ಕ್ರಿಶ್ಚಿಯನ್ ಕ್ಯಾಲೆಂಡರ್—ಬಿ. ಸೀತಾರಾಮಶಾಸ್ತ್ರೀ
೯೦ ಆಲ್‌ಫ್ರೆಡ್ ನೊಬೆಲ್—ಎಸ್. ಸುಬ್ರಹ್ಮಣ್ಯಂ
೯೧ ಗೃಹರಚನಾವಿಧಿ—ಕೆ. ಎಸ್. ಸದಾನಂದ
೯೨ ಹಿಂದೂಧರ್ಮಸಾರ—ಸ್ವಾಮಿ ಸೋಮನಾಥಾನಂದ
೯೩ ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳು

—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್

೯೪ ದಾರಿತಪ್ಪಿದ ಮಕ್ಕಳು—ಎನ್. ಎಸ್. ಶಾಂತಮ್ಮ
೯೫ ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೯೬ ಪ್ರೇರಣೆ—ಕೆ. ನಾಗರಾಜಶಾಸ್ತ್ರಿ
೯೭ ಪ್ರಾಣಿಗಳ ರಚನಾ ಕೌಶಲ

—ಎಚ್. ಬಿ. ದೇವರಾಜ ಸರ್ಕಾರ್

೯೮ ಭಾರತೀಯ ರಾಷ್ಟ್ರೀಯತೆಯ ವಿಕಾಸ

—ಎ. ಎಸ್. ನಂಜುಂಡಸ್ವಾಮಿ

೯೯ ಶ್ರೀಹರ್ಷ—ಸಿ. ಅನಂತಾಚಾರ್
೧೦೦ ಪ್ರಸಾರಾಂಗ—ಡಾ॥ ಕೆ. ವಿ. ಪುಟ್ಟಪ್ಪ
೧೦೧ ಷಟ್‌ಸ್ಥಲ ಸಿದ್ಧಾಂತ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೧೦೨ ಶಕ್ತಿವಿಶಿಷ್ಟಾದ್ವೈತವೇದಾಂತ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ

೧೦೩ ಉಪನಿಷತ್ ಪರಿಚಯ—ಸ್ವಾಮಿ ಸೋಮನಾಥಾನಂದ
೧೦೪ ತುಲಸೀದಾಸ—ಡಾ॥ ಹಿರಣ್ಮಯ
೧೦೫ ಸಿಹಿಮೂತ್ರರೋಗ—ಡಾ॥ ಎ. ನಾರಾಯಣಪ್ಪ
೧೦೬ ಭಾರತದಲ್ಲಿ ವಿಮೆ—ಕೆ. ಗೋಪಾಲ್
೧೦೭ ಸಕ್ಕರೆ—ಕೆ. ಎಸ್. ಲಕ್ಷ್ಮಣರಾವ್
೧೦೮ ಕಲಾಯ್ಡ್ ವಿಜ್ಞಾನ—ಕೆ. ಎಸ್. ಲಕ್ಷ್ಮಣರಾವ್
೧೦೯ ಎಕ್ಸ್-ಕಿರಣಗಳು—ಕೆ. ಶೇಷಾದ್ರಿ ಅಯ್ಯಂಗಾರ್
೧೧೦ ವೇಮನ—ಕೆ. ವೆಂಕಟರಾಮಪ್ಪ
೧೧೧ ವಾಯುಮಂಡಲ—ಕೆ. ಎಸ್. ಲಕ್ಷ್ಮಣರಾವ್
೧೧೨ ಅಂತರಿಕ್ಷಯಾನ—ವೈ. ವಿ. ಇಂದಿರಾಬಾಯಿ
೧೧೩ ಹತ್ತಿ—ಕೆ. ಎಸ್. ಲಕ್ಷ್ಮಣರಾವ್
೧೧೪ ಕನ್ನಡದಲ್ಲಿ ಅನುಭಾವ ಸಾಹಿತ್ಯ
—ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ
೧೧೫ ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೧೧೬ ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೧೧೭ ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೧೧೮ ನಮ್ಮ ನ್ಯಾಯಾಂಗ—ಆರ್. ಗುರುರಾಜ
೧೧೯ ಸ್ವಾಮಿ ವಿವೇಕಾನಂದ—ಸ್ವಾಮಿ ಸೋಮನಾಥಾನಂದ
೧೨೦ ಗರ್ಭಿಣಿ ಮತ್ತು ಶಿಶುಸಂರಕ್ಷಣೆ—ಡಾ॥ ವಿ. ಎಲ್ ಪಂಡಿತ್
೧೨೧ ಬೆಲೆಗಳ ನಿರ್ಧಾರ ಮತ್ತು ಯೋಜನೆಗಳ ಯಶಸ್ಸು
—ಟಿ. ಬಿ. ಚಂದ್ರಶೇಖರಯ್ಯ
೧೨೨ ಜೀವಸತ್ವಗಳು—ಕೆ. ಎಸ್. ಲಕ್ಷ್ಮಣರಾವ್
೧೨೩ ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ
—ದೇವಂಗಿ ಟಿ. ಚಂದ್ರಶೇಖರ
೧೨೪ ದ್ಯುತಿಸಂಶ್ಲೇಷಣ—ಎಂ. ಆರ್. ರಾಘವೇಂದ್ರರಾವ್
೧೨೫ ಅನುವಂಶೀಯತೆ—ಹಾ. ಬ. ದೇವರಾಜ ಸರ್ಕಾರ್
೧೨೬ ವಿಶ್ವಶಾಂತಿ—ಎಚ್. ಎಲ್. ಮಲ್ಲಯ್ಯ, ಎಂ.ಎ.
೧೨೭ ಭಗವದ್ಗೀತಾ ಸಂದೇಶ—ಸ್ವಾಮಿ ಸೋಮನಾಥಾನಂದ
೧೨೮ ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ

೧೨೯ ಕೆಲವು ಸಾಂಕ್ರಾಮಿಕ ರೋಗಗಳು

—ಡಾ॥ ಎ. ನಾರಾಯಣಪ್ಪ

೧೩೦ ವಿಶಿಷ್ಟಾದ್ವೈತ ಸಂಗ್ರಹ—ಎಂ. ಬಿ. ಎಸ್. ಐಯ್ಯಂಗಾರ್

೧೩೧ ಮಾನವ ಮತ್ತು ಪ್ರಕೃತಿ—ಟಿ. ಜಿ. ಸಿದ್ಧಪ್ಪಾರಾಧ್ಯ

೧೩೨ ಲೀಲಾವತೀಗಣಿತ ಮತ್ತು ಶ್ರೀನಿವಾಸ ರಾಮಾನುಜನ್

—ಬಿ. ಸೀತಾರಾಮಶಾಸ್ತ್ರೀ

೧೩೩ ಗೀತಾಮಾತೆ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ

೧೩೪ ಇಂಡೊನೇಷ್ಯ—ಸಿ. ಕೆ. ಸೂರ್ಯನಾರಾಯಣರಾವ್

ಸಾದಾ ಪ್ರತಿ ೨೫ ಪೈಸೆ; ಉತ್ತಮ ಪ್ರತಿ ೩೭ ಪೈಸೆ.